॥ ಓಂ ॥ ಶ್ರೀಃ ॥ ಓಂ ॥

ಭಾವಿ ಸಮೀರ ಪದಾರ್ಹ ಶ್ರೀವಾದಿರಾಜ ಕೃತ

# ಭೂಗೋಳ ವರ್ಣನೆ



ಅನುವಾದ, ವ್ಯಾಖ್ಯಾನ

ವಿ. ಬಾದರಾಯಣ ಮೂರ್ತಿ

ಪುರಾಣ ವಿಜ್ಞಾನ ಮಂದಿರ
41/1ಎ, 3ನೇ ಅಡ್ಡರಸ್ತೆ, 3ನೇ ವಿಭಾಗ, ತ್ಯಾಗರಾಜನಗರ,
ಬೆಂಗಳೂರು – 560 028.

1991




Expansion of "OMKARA"



Chaturmukha Brahma in the naval lotus of Sriman Narayana



" Meru Mountain " with Brahma's abode at the top,




Sri A. R. Badarinarayan, Ex-Edn. Minister & M. P.; Sri Visweshatirtha Swamiji Sri Pejawar Mutt; Sri Vijnananidhi Tirtha Swamiji of Sri Sripadaraja mutt, Prof: S. K. Ramachandra Rao

Sri V. Badarayana murthy.

॥ ॐ ॥ श्री ॥ ॐ ॥

कल्याणाद्भुत गात्राय कामितार्थप्रदायिने ।
श्रीमद्वेंकटनाथाय श्रीनिवासाय मंगलम् ॥

वादिराजार्पितामाला शालिग्रामात्मिकामुदा
धार्यते येन तं वन्दे वेंकटेशं दयानिधिम् ॥



This book is published with the financial assistance of Tirumala Tirupati Devasthanams under their scheme 'Aid to publish religious books.'

# ಭೂಗೋಳ ವರ್ಣನೆ

( ಶ್ರೀವಾದಿರಾಜ ಗುರುರಾಜ ಕೃತ )

# BHUGOLA VARNANAM

ಪೀಠಿಕೆ, ಅನುವಾದ, ವ್ಯಾಖ್ಯಾನ ಮತ್ತು ಚಿತ್ರಗಳು

ಶ್ರೀ ವಿ. ಬಾದರಾಯಣ ಮೂರ್ತಿ ಇವರಿಂದ
Purana Vijnana Mandira, 41/1A, III Cross, III Block.
Thyagarajanagara, Bangalore-560 028.

First Edition 1,000 Copies, 1991



ಪ್ರಕಾಶಕರು
ಪುರಾಣ ವಿಜ್ಞಾನ ಮಂದಿರ, ಬೆಂಗಳೂರು – 28.





Price Rs. 30/-

Printed at : Sree Kamadhenu Printers, Thyagarajanagar, Bangalore-28.

ಶ್ರೀ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ
ಶ್ರೀ ಪೇಜಾವರ ಅಧೋಕ್ಷಜ ಮಠ
ಜಗದ್ಗುರು ಮಧ್ವಾಚಾರ್ಯ ಸಂಸ್ಥಾನ
ಉಡುಪಿ – 576101, ಕರ್ನಾಟಕ

ಫೋನ್ : 20498

ಭಗವಂತನ ಮಹಾಮಹಿಮೆಯುನ್ನು ತಿಳಿದುಕೊಂಡು ಅವನಲ್ಲಿ ಮಾಡುವ ಅತಿಶಯ ಪ್ರೇಮವೇ ಭಕ್ತಿಯಾಗಿದೆ. ಭಗವಂತನ ಜಗತ್ ಸೃಷ್ಟಿಯೇ ಮೊದಲಾದ ಅದ್ಭುತ ವ್ಯಾಪಾರವನ್ನೂ ತಿಳಿದಾಗ ಅವನ ವಿಶೇಷ ಮಹಿಮೆಯ ಪರಿಚಯವಾಗಿ ನಮಗೆ ಅವನಲ್ಲಿ ಅತಿಶಯ ಭಕ್ತಿಯು ಉಂಟಾಗುವುದು. ಅದಕ್ಕಾಗಿ ಪರಮಾತ್ಮನು ಸೃಷ್ಟಿಸಿದ ಈ ವಿಶಾಲ ವಿಶ್ವದ ಪರಿಚಯವೂ ನಮಗೆ ಅವಶ್ಯವಾಗಿದೆ. ಭೌತಿಕ ವಿಜ್ಞಾನವು ಪ್ರಕೃತಿ, ಭೂಗೋಲ, ಖಗೋಳಗಳ ವಿವರಣೆಯ ಜೊತೆಗೆ ಈ ವಿಶ್ವದ ವಿಸ್ತಾರ ಮತ್ತು ಪ್ರಕೃತಿಯಲ್ಲಿ ಅಡಗಿರುವ ವಿಚಿತ್ರ ಶಕ್ತಿಗಳ ಪರಿಚಯವನ್ನು ಮಾಡಿಸಿ ಭಗವಂತನ ಅನಂತ ಶಕ್ತಿಯ ದರ್ಶನವನ್ನು ನಮಗೆ ನೀಡುತ್ತದೆ. ನಮ್ಮ ಋಷಿಮುನಿಗಳು ತಮ್ಮ ದಿವ್ಯ ದೃಷ್ಟಿಯಿಂದ ವಿಶ್ವವನ್ನು ನಿರೀಕ್ಷಿಸಿ ನಮ್ಮ ಕಣ್ಣಿಗೆ ಅಗೋಚರವಾದ ಪ್ರಪಂಚವನ್ನೂ ವಿವೇಚಿಸಿದ್ದಾರೆ. ನಮ್ಮ ಅನೇಕ ಪ್ರಾಚೀನ ಗ್ರಂಥಗಳನ್ನು ಅವಲೋಕಿಸಿದಾಗ ಆಧುನಿಕ ಭೌತಿಕ ವಿಜ್ಞಾನಿಗಳು ಕಂಡು ಹಿಡಿದ ಪ್ರಕೃತಿ ರಹಸ್ಯಗಳನ್ನು ಅದಕ್ಕಿಂತ ಎಷ್ಟೋ ವರ್ಷಗಳ ಮೊದಲೇ ನಮ್ಮ ಗ್ರಂಥಕಾರರು ಕಂಡಿದ್ದಾರೆಂಬುದು ಸ್ಪಷ್ಟವಾಗುವುದು. ನ್ಯೂಟನ್ನನು ಹೇಳಿದ ಆಕರ್ಷಣ ಶಕ್ತಿಯ ವಿಷಯವು ತಮ್ಮದೇ ಆದ ರೀತಿಯಲ್ಲಿ ಪ್ರಾಚೀನ ಜ್ಯೋತಿಷ್ಯದಲ್ಲಿ ಉಲ್ಲೇಖವಾಗಿರುವುದನ್ನೂ ನೋಡಬಹುದು. ವಿಜ್ಞಾನಿಗಳ ಉಪಕರಣಗಳಿಗೂ ನಿಲುಕದ ಅನೇಕ ಸಂಗತಿಗಳನ್ನು ನಮ್ಮ ಋಷಿಗಳು ಅತೀಂದ್ರಿಯ ದೃಷ್ಟಿಯಿಂದ ನೋಡಿದ್ದರು. ಇಂದು ಭೂಗೋಲದ ವಿಷಯದಲ್ಲಿ ಆಧುನಿಕ ಸಂಶೋಧಕರಿಗೂ ನಮ್ಮ ಪ್ರಾಚೀನ ಗ್ರಂಥಗಳಿಗೂ ತುಂಬಾ ವಿರೋಧಗಳು ಕಂಡು ಬರುತ್ತವೆ. ಆದರೆ ಆಧುನಿಕ, ಪೌರಸ್ತ್ಯ ವಿಜ್ಞಾನಿಗಳಿಬ್ಬರೂ ಒಂದೆಡೆ ಸೇರಿ ಚರ್ಚೆ ವಿಮರ್ಶೆಗಳನ್ನು ನಡೆಸಿದರೆ ಈ ವಿಷಯದಲ್ಲಿ ಜಗತ್ತಿಗೆ ಹೊಸಬೆಳಕು ದೊರೆತು ವಿಶ್ವದ ಬಗ್ಗೆ ಸರಿಯಾದ ನಿರ್ಣಯವನ್ನು ಪಡೆಯಲು ಅನುಕೂಲವಾಗಬಹುದು. ನಮ್ಮ ಪ್ರಾಚೀನ ಗ್ರಂಥಗಳ ನಿಜವಾದ ಅರ್ಥವನ್ನು ತಿಳಿಯಲು ನಮಗೆ ಇದರಿಂದ ಸಹಾಯವಾಗಬಹುದು. ಪುರಾಣಗಳಿಂದ ಆಪಾತತಃ ತೋರುವ ಅರ್ಥವು ಅದರ ನಿಜವಾದ ಅರ್ಥ

ವಾಗಿರುವುದಿಲ್ಲ. ಪುರಾಣಗಳ ಸರಿಯಾದ ಅರ್ಥವನ್ನು ತಿಳಿಯಲು ನೂರಾರು ಪ್ರಕಾರಗಳು ಇವೆ ಎಂದೂ, ಅವುಗಳನ್ನು ತಿಳಿಯದೆ ಪುರಾಣಗಳ ನಿಜಾರ್ಥವು ಗೊತ್ತಾಗಲಾರದೆಂದೂ ಶ್ರೀ ಮಧ್ವಾಚಾರ್ಯರು ನಿರೂಪಿಸಿದ್ದಾರೆ. ಆದುದರಿಂದ ಪುರಾಣಗಳನ್ನು ಸರಿಯಾಗಿ ಪರಿಶೀಲಿಸದೆ ಅವುಗಳಿಂದ ತೋರುವ ವಿಷಯಗಳನ್ನು ಅವೈಜ್ಞಾನಿಕವೆಂದು ಹೇಳಬಾರದು. ಅದರಂತೆ ಆಧುನಿಕ ವಿಜ್ಞಾನದಲ್ಲೂ ಅನೇಕ ಅಸಂಬದ್ಧತೆಗಳೂ, ಬಿಡಿಸಲಾರದ ಕಗ್ಗಂಟುಗಳೂ ಇವೆ. ಆದುದರಿಂದ ಭೌತಿಕ ವಿಜ್ಞಾನಿಗಳೂ, ಅಧ್ಯಾತ್ಮವಾದಿಗಳೂ ಸೇರಿ ಚರ್ಚಿಸಿದಾಗಲೇ ಈ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು. ಶ್ರೀ ಬಾದರಾಯಣಮೂರ್ತಿಗಳು ಈ ದಿಸೆಯಲ್ಲಿ ತುಂಬಾ ಅಧ್ಯಯನ ನಡೆಸಿ ಪ್ರಾಚೀನ ಭೂಗೋಳಿಕ ಗ್ರಂಥಗಳನ್ನು ವೈಜ್ಞಾನಿಕವಾಗಿ ವಿವೇಚಿಸಿದ್ದಾರೆ. ಆಧುನಿಕ ಆಕ್ಷೇಪಣೆಗಳಿಗೆ ಸಮರ್ಥವಾಗಿ ಉತ್ತರಿಸುವ ಪ್ರಯತ್ನ ನಡೆಸಿದ್ದಾರೆ. ಜಿಜ್ಞಾಸುಗಳು ಅವರಿಗೆ ವಿಶೇಷವಾದ ಉತ್ತೇಜನ ನೀಡಬೇಕಾಗಿ ಬಯಸಿದ್ದೇವೆ.

ಶ್ರೀ ಬಾದರಾಯಣಮೂರ್ತಿಗಳು ಭಾಗವತ ಮುಂತಾದ ಗ್ರಂಥಗಳ ಆಧಾರದಲ್ಲಿ ಶ್ರೀ ವಾದಿರಾಜ ಗುರುವರ್ಯರು ರಚಿಸಿದ ಭೂಗೋಲವರ್ಣನೆ ಗ್ರಂಥದ ಅನುವಾದವನ್ನು ರಚಿಸಿದ್ದಾರೆ. ಜಿಜ್ಞಾಸುಗಳಿಗೆ ಉಪಯುಕ್ತವಾದ ಈ ಕೃತಿಯನ್ನು ಸ್ವಾಗತಿಸುತ್ತಿದ್ದೇವೆ. ಇದೇ ರೀತಿಯಲ್ಲಿ ಶ್ರೀ ಬಾದರಾಯಣಮೂರ್ತಿಯವರಿಂದ ವಿಶೇಷವಾದ ಜ್ಞಾನ ಸೇವೆಯನ್ನು ಶ್ರೀ ಕೃಷ್ಣನು ಮಾಡಿಸಲೆಂದು ಆಶಿಸುವೆವು. ಇದನ್ನು ಆಂಗ್ಲ ಭಾಷೆಯಲ್ಲಿ ಪ್ರಕಾಶನಗೊಳಿಸಿದ ಮದರಾಸಿನ ಅಖಿಲ ಭಾರತ ಮಾಧ್ವ ಮಹಾಮಂಡಳಿ ಶಾಖೆಯನ್ನು ನಾವು ಅಭಿನಂದಿಸುತ್ತೇವೆ.

Camp : ಮದ್ರಪುರಿ
ಭಾದ್ರಪದ ಶುಕ್ಲ ತ್ರಯೋದಶೀ
13–9–1989

(ಸಹಿ) ಶ್ರೀ ವಿಶ್ವೇಶತೀರ್ಥ

॥ ಶ್ರೀ ಗೋಪೀನಾಥೋ ವಿಜಯತೇ ॥

ಶ್ರೀ ಶ್ರೀಪಾದರಾಜ ಮಠ
58, ರಾಘವೇಂದ್ರ ಕಾಲೋನಿ,
ಚಾಮರಾಜಪೇಟೆ, ಬೆಂಗಳೂರು – 18. ತಾರೀಖು 24–9–1989

ವೇದಮೂರ್ತಿ ಬಾದರಾಯಣಚಾರ್ಯರಿಗೆ ನಾರಾಯಣ ಸ್ಮರಣಪೂರ್ವಕ ಬರೆದು ಕಳುಹಿಸಿದ ನಿರೂಪ.

ಶ್ರೀ ಬಾದರಾಯಣಮೂರ್ತಿಯವರು ಬಹಳಷ್ಟು ಶ್ರಮಪಟ್ಟು ಬರೆದಿರುವ ಭೂಗೋಳ ವರ್ಣನೆ ಎಂಬ ಗ್ರಂಥದ ಕರಡು ಪುಸ್ತಕದ ಕೆಲವು ವಿಷಯಗಳನ್ನು ನಾವು ಓದಿರುತ್ತೇವೆ. ಈ ಕರಡು ಪ್ರತಿಯ ಎಲ್ಲಾ ವಿಚಾರವನ್ನೂ ಓದಿಲ್ಲವಾದರೂ, ಈ ಪುಸ್ತಕದ ಶೈಲಿ ಮತ್ತು ವಿಷಯಗಳ ವಿಶ್ಲೇಷಣೆಗಳು ಸಾಮಾನ್ಯ ಜನರಿಗೂ ಪರಮಾತ್ಮನಿಂದ ಸೃಷ್ಟವಾದ ಈ ಜಗತ್ತಿನ ಒಂದು ವಿಹಂಗಮ ನೋಟದ ಅಭಿಪ್ರಾಯವು ಬರಲು ಸಾಧ್ಯವೆನಿಸುವಂತೆ ಇವೆ ಎನ್ನಲು ಅಡ್ಡಿಯಿಲ್ಲ. ಈ ಗಹನ ವಿಷಯವನ್ನು ಇಷ್ಟು ಸರಳ ರೀತಿಯಲ್ಲಿ ಬರೆಯಲು ಬಾದರಾಯಣಮೂರ್ತಿಯವರು ಅನೇಕ ಶಾಸ್ತ್ರಗ್ರಂಥಗಳನ್ನೂ ಹಾಗೂ ವಿಜ್ಞಾನಿಗಳು ಈ ವಿಚಾರವಾಗಿ ಬರೆದಿರುವ ಪುಸ್ತಕಗಳಲ್ಲಿನ ಅವರ ಅಭಿಪ್ರಾಯಗಳನ್ನೂ ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿರುವುದಲ್ಲದೆ ಅನ್ಯಮತೀಯರು ಅಂದರೆ ಕ್ರೈಸ್ತಮತದವರು ಮತ್ತು ಇಸ್ಲಾಂ-ಮತದವರುಗಳೂ ಈ ಜಗತ್ ಸೃಷ್ಟಿಯ ಬಗ್ಗೆ ವ್ಯಕ್ತಪಡಿಸಿರುವ ಅಭಿಪ್ರಾಯಗಳು ಎಷ್ಟರ ಮಟ್ಟಿಗೆ ಮಧ್ವಶಾಸ್ತ್ರಕ್ಕೆ, ವಿಶೇಷವಾಗಿ ಭಾವೀ ಸಮೀರರೆಂದು ಪ್ರಸಿದ್ಧರಾದ ಶ್ರೀ ಶ್ರೀ ವಾದಿರಾಜಸ್ವಾಮಿಗಳವರ ಭೂಗೋಳ ವರ್ಣನೆಗೆ ಸರಿಹೊಂದುತ್ತವೆ ಎಂಬ ಅಂಶವನ್ನು ಯೋಗ್ಯ ರೀತಿಯಲ್ಲಿ ತಿಳಿಸಿ, ವಿಶೇಷ ಉಪಕಾರ ಮಾಡಿರುತ್ತಾರೆ.

ಮುಖ್ಯವಾಗಿ, ವಿಜ್ಞಾನಿಗಳು ಪ್ರಕೃತಿಯ ಸ್ವರೂಪವನ್ನು ತಿಳಿಯಲು ಮಾಡಿರುವ ಏನೆಲ್ಲ ಸಾಧನೆಗಳೂ ಸಹ ಒಂದು ಅವಧಿಯನ್ನು ಹೊಂದಿರುವುದಾಗಿಯೂ ತಿಳಿಸಿರುವುದಲ್ಲದೆ, ಈ ವಿಜ್ಞಾನಿಗಳು ಹಾಗೂ ಈಗಿನ ತತ್ವಜ್ಞರುಗಳು ಕೇವಲ ಸುಖಕ್ಕಾಗಿ ಮಾಡುತ್ತಿರುವ ಪ್ರಯತ್ನಗಳು ಹಾಸ್ಯಾಸ್ಪದವೇ ಹೊರತು ಫಲಕಾರಿಯಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಯುಕ್ತವಾಗಿರುತ್ತದೆ.

ಮೇಲೆ ತಿಳಿಸಿದಂತೆ, ವೈಜ್ಞಾನಿಕ ಸಾಧನೆಗಳೂ ವೈದಿಕ ತತ್ತ್ವದಿಂದ ಭಿನ್ನರಾದ ತತ್ತ್ವಜ್ಞರ ತತ್ತ್ವಗಳೂ ನೈಜತತ್ತ್ವ ಸ್ವರೂಪದಿಂದ ಭಿನ್ನವಾಗಿರುವ ಕಾರಣ, ಅಪೌರುಷೇಯಗಳಾದ ವೇದಗಳ ಅರ್ಥವನ್ನು ಸರಿಯಾಗಿ ತಿಳಿದು, ತಮ್ಮ ಜ್ಞಾನ ಚಕ್ಷುಸ್ಸಿನಿಂದ ಯಂತ್ರೋಪಕರಣಗಳಿಂದಲೇ ತಿಳಿಯಲಸಾಧ್ಯವಾದ ತತ್ತ್ವರಹಸ್ಯ ಗಳನ್ನು ತಿಳಿಸಿಕೊಟ್ಟಿರುವ ಶ್ರೀ ಶ್ರೀ ವಾದಿರಾಜರ ಭೂಗೋಳವರ್ಣನೆಯನ್ನು ವಿಜ್ಞಾನಿಗಳೂ ಒಪ್ಪುವ ರೀತಿಯಲ್ಲಿ ನಿರೂಪಿಸಿರುವ ಈ ಪುಸ್ತಕವನ್ನು ಸಜ್ಜನರು ಪ್ರಾಮಾಣಿಕವಾಗಿ ಓದಿ ಅರ್ಥೈಸಿಕೊಂಡಲ್ಲಿ ಈ ಗ್ರಂಥಕರ್ತರ ಶ್ರಮ ಸಾರ್ಥಕ ವಾಗುವುದೆಂದು ಭಾವಿಸಿ, ಗ್ರಂಥಕರ್ತರಿಗೆ ನಮ್ಮ ಆರಾಧ್ಯಮೂರ್ತಿ ಶ್ರೀ ಶ್ರೀ ಹಯವದನ ರಂಗವಿಠಲಾತ್ಮಕ ಶ್ರೀ ಶ್ರೀ ಗೋಪೀನಾಥ ದೇವರು ಪೂರ್ಣ ಸಾರ್ಥಕ ಆಯುಸ್ಸನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

(ಸಹಿ) ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥರು

ನಮ್ಮ ಈ ಪ್ರಕಟಣೆಗೆ ಮೆಚ್ಚಿ ಆಶೀರ್ವಚನವನ್ನು ನೀಡಿರುವ ಶ್ರೀ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೂ, ಶ್ರೀ ಶ್ರೀಪಾದರಾಜ ಮಠಾಧೀಶರಾದ ಶ್ರೀ ವಿಜ್ಞಾನ ನಿಧಿತೀರ್ಥ ಶ್ರೀಪಾದಂಗಳವರಿಗೂ, ತಮ್ಮ ವಿಮರ್ಶಾತ್ಮಕವಾದ ಪೂರ್ವ ಪೀಠಿಕೆಯನ್ನು ದಯಪಾಲಿಸಿರುವ ಪ್ರೊ॥ ಕೆ.ಟಿ. ಪಾಂಡುರಂಗಿಯವರಿಗೂ, ಮದರಾಸಿನ ಧೀರ ವಿಮರ್ಶಕ ಶ್ರೀ ಕೆ. ರಘುಪತಿರಾವ್ ಅವರಿಗೂ, ಮುದ್ರಣಕಾರ್ಯಕ್ಕಾಗಿ ಕಾಗದವನ್ನೊದಗಿಸಿದ, ಯೂಪ್ಲಾಸ್ಟ್ ಕಾರ್ಖಾನೆಯ ಮಾಲೀಕರಾದ ಶ್ರೀ ಜಿ. ನಾಗೇಶ್ ಅವರಿಗೂ, ಹಾಗೂ ಮಿತ್ರರಾದ ಕಾಮಧೇನು ಮುದ್ರಣಾಲಯದ ಮಾಲೀಕರಿಗೂ ಹೃತ್ಪೂರ್ವಕವಾಗಿ ನಮನಗಳನ್ನು ಸಲ್ಲಿಸಲು ಸಂತಸವುಳ್ಳವನಾಗಿದ್ದೇನೆ.

ವಿ. ಬಾದರಾಯಣ ಮೂರ್ತಿ

# PREFACE

(by Prof: K. T. Pandurangi, *former Professor of Sanskrit. Bangalore University: President, Mythic Society, Bangalore*)

I had the pleasure of reading the English summary of Bhugola Varnanam of Sri Vadiraja Tirtha, prepared by Sri V. Badarayana Murthy. He has also added a long introduction to this work which incorporates the gist of the papers presented at the seminar on cosmogony and cosmography organised by him in Bangalore during August 1987.

This volume has two purposes in view. 1. To make clear the concept and details of the Geography of the whole universe consisting of the fourteen lokas as described in Bhugola Varnanam by Sri Vadiraja Tirtha to such readers who do not know Sanskrit. 2. To elucidate this concept and details in terms of modern knowledge on this subject.

It is natural that the two do not agree in all the details. One should not be in a hurry to reject either the traditional or the modern merely on this ground. Scientific enquiry knows no end. Modern science is still quite young and should have the ambrition to grow. Its experimental method is only one way of scientific enquiry. Our ancient seers probably had much superior methods of enquiry. They were able to cultivate ceratin mental faculties of man that could probe into the mysteries of the universe much deeper.

Sri Vadiraja tirtha, the author of Bhugola Varnanam, was one such great seer of mystic powers. His Bhugola Varnanam was the outcome of both his direct vision of the structure of the universe through his mystic power and also his deep study of puranas that give the details of the universe. Therefore, modern screntists should take it as a guide to continue their enquiry further. Sri V. Badarayana Murthy has analysed the contents of this great work in a simple and clear manner. He has given modern equivalents of calculations of the locations of planets and distances, seas, worlds, etc., and this is very helpful to understand the ancient calculations.

The gist of the seminar papers included in the introduction throws useful light on different aspects of this problem. It is heartening to note that many young scientists have handled the matter with an open mind and with convincing arguments. I appeal to senior scicntists to overcome their prejudice that the Vedas and puranas contain unscientific and imaginary data and all this does not stand any scientific scrutiny. They must accept the fact that our ancient seers were more close to Nature and had different methods of enquiry other than the present day experimental method. But their conclusions are still available in our ancient literature and we must try to find the clues to understand them. If we are not able to read the script of certain ancient documents, we should not rush to the conclusion that these ancients had no language at all. Our branding of our ancient scientific thought as unscientific amounts to such an attitude.

Sri V. Bedarayana Murthy has done well in bringing this great work on world Geography to the notice of modern scholars. The pictures and charts included by him have added to the usefulness of this volume.

—(Sd.) **K. T. Pandurangi**

**K. Raghupathi Rao**
B.E., (Mech.) Hons.) Elec.,
INSTITUTE OF GITA STUDIES
**" Dharmaprakash "**
**MADRAS - 600 084**
12th August, 1989

## BHUGOLA VARNANAM

Education after independence has taught us only to laugh at our ancient wisdom. The material Science which gets lion's share under Education, has no answer to human problems, for it does not accept that a man has a soul to save.

Added is the bluff that is carried on vehemently that our earth has three motions. The first, it spins on its own axis. The second, it orbits round the sun. The third, it has precession. If we accept these motions for the earth, no life would be possible on this earth.

Our ancient Scriptures hold that the earth is stationary. Not only that; it is just one of the fourteen lokas created by the Lord. Even though their truth is vouchsafed for us by the Lord, Himself, thanks to the doubts injected by Material Science, which is based on imperfect perce–ption and logic based on such faulty perception, even scripturally oriented people feel timid to project the views given by Scriptures.

Shri V. Badarayana Murthy has made a life-long study of both the views. No one is asking anyone to accept this view or that view. But there is sufficient scope for further scrutiny on received knowledge which is paraded before our children.

It is for the serious reader to consider the two views and arrive at his own conclusion. Saint Sri Vadiraia has given this work, so that the devotees of the Lord may see their way clearly.

(Sd) K. RAGHUPATHI RAO

## — ಅನುಕ್ರಮಣಿಕೆ —

॥ ॐ ॥ ಶ್ರೀಃ ॥ ॐ ॥

॥ ಶ್ರೀ ಗುರುಭ್ಯೋ ನಮಃ ॥ ಹಂಃ ಓಂ ॥

## ಭಾವೀ ಸಮೀರಪದಾರ್ಹ ಶ್ರೀ ವಾದಿರಾಜ ಗುರುರಾಜರಿಂದ
## ವಿರಚಿತವಾದ

# ಭೂಗೋಳ ವರ್ಣನೆ

## ಪೀಠಿಕೆ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ॥
ಪ್ರಸನ್ನವದನಂ ಧ್ಯಾಯೇತ್ಸರ್ವ ವಿಘ್ನೋಪಶಾಂತಯೇ ॥

ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ
ಶ್ರೀ ಗೋಪಾಲಕೃಷ್ಣಾಯ ನಮಃ

### ಶ್ರೀ ವಾದಿರಾಜ ಗುರುರಾಜರು

ಜೀವರು ಸ್ವಭಾವತಃ ಸಾತ್ವಿಕರು, ರಾಜಸರು, ತಾಮಸರು ಎಂದು ತ್ರಿವಿಧ ರಾಗಿರುವರಲ್ಲದೆ, ಅವರಲ್ಲಿ ಸಾಮಾನ್ಯರು, ಪ್ರಬಲರು, ಅತಿಪ್ರಬಲರು ಎಂಬುದಾಗಿ ಯೂ ತಾರತಮ್ಯವುಳ್ಳವರಾಗಿರುವರೆಂದು ಶ್ರೀಮನ್ ಮಧ್ವಾಚಾರ್ಯರು ಶಾಸ್ತ್ರ ಗಳಿಂದ ಉದ್ಧರಿಸಿದ ಸುವಾಕ್ಯಗಳಿಂದಲೇ ತಿಳಿಸಿಕೊಟ್ಟಿದ್ದಾರೆ. ಸಾತ್ವಿಕ ಜೀವರಲ್ಲಿ ಅತ್ಯಂತ ಮೇಲ್ಮಟ್ಟದಲ್ಲಿರುವ ಒಂದು ಗುಂಪಿನವರು ಎಂದೆಂದಿಗೂ ಸ್ವಾತ್ವಿಕ ಶಿರೋ ಮಣಿಗಳೇ ಹೊರತು, ಅವರಲ್ಲಿ ರಜೋಗುಣ ತಮೋಗುಣ ಸಂಬಂಧಿಗಳಾದ ದೋಷಗಳು ಎಂದಿಗೂ ಇರುವುದಿಲ್ಲ. ಆ ಗುಂಪಿನವರಿಗೆ 'ಋಜುಗಳು' ಎಂದು ಹೆಸರು. ಅವರೇ ಬ್ರಹ್ಮಪದವಿಗೆ ಅರ್ಹರು. ಆ ಗುಂಪಿನ ಸ್ತ್ರೀ ಜೀವರೇ ಸರಸ್ವತೀ ದೇವಿಯ ಪದಾರ್ಹರು. ಋಜು ಜೀವರು ಒಬ್ಬೊಬ್ಬರೂ 200 ಬ್ರಹ್ಮ ಕಲ್ಪಗಳ

ಕಾಲ ಭಗವಂತನ ಸೇವಾರೂಪವಾದ ಸಾಧನೆಯಿಂದ ತಮ್ಮ ಸ್ವರೂಪ ವ್ಯಕ್ತಿತ್ವ ವಿಕಾಸವನ್ನು ಹೊಂದಿ ಮುಕ್ತರಾಗುವರು. ಈಗ ಪ್ರಚಲಿತವಾಗಿರುವ ವಿಶ್ವದಲ್ಲಿ ಅಂತಹ 200 ಮಂದಿ ಇದ್ದಾರೆ. ಎಲ್ಲರಿಗಿಂತಲೂ ಮುಂದಾಗಿರುವವರು ಬ್ರಹ್ಮಪಟ್ಟವನ್ನು ಪಡೆದಿದ್ದಾರೆ ; ಎರಡನೆಯವರು, 'ವಾಯು' ಎಂಬ ಹೆಸರಿನಿಂದ ವಿಶ್ವದ ಎಲ್ಲಾ ಚಟುವಟಿಕೆಗಳಿಗೂ ಮುಖ್ಯ ಕಾರಣರಾಗಿದ್ದಾರೆ ; ಮೂರನೆಯವರು 'ಲಾತವ್ಯ' ಎಂಬ ಹೆಸರಿನಿಂದ ವಾಯು ಪದವಿಗೆ ಬೇಕಾದ ವಿಶ್ವವ್ಯಾಪಾರಗಳ ಪರಿಚಯವನ್ನು ಹೊಂದುತ್ತಾ ಬ್ರಹ್ಮ ವಾಯುಗಳ ಜೊತೆಯಲ್ಲಿ ಕಾರ್ಯನಿರತರಾಗಿದ್ದಾರೆ. ಅವರೇ ಶ್ರೀ ವಾದಿರಾಜ ಗುರು ಸಾರ್ವಭೌಮರು ; ಹಾಗೆಂದು ವಿಜಯದಾಸರೇ ಮೊದಲಾದ ಭಗವದಪರೋಕ್ಷಿಗಳು ಕೊಂಡಾಡಿದ್ದಾರೆ. 'ವೃಂದಾವನಾಖ್ಯಾನುವೆಂಬ' ತಮ್ಮ ಗ್ರಂಥದಲ್ಲಿ ಶ್ರೀ ಗುರುರಾಜರೇ ತಮ್ಮ ವಿಚಾರವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. 120 ವರ್ಷಗಳ ಕಾಲ ತುಂಬು ಜೀವನವನ್ನು ನಡೆಸಿ, ಮಧ್ವಮತೋದ್ಧಾರ ಕಾರ್ಯಗಳನ್ನು ವಿಪುಲವಾಗಿ ಸಮಾಚರಿಸಿ, ಸೋದೆಯಲ್ಲಿ ವೃಂದಾವನ ಪ್ರವೇಶ ಮಾಡಿದ ನಂತರ, ಒಬ್ಬ ಹುಟ್ಟು ಮೂಕನಲ್ಲಿ ಪ್ರವಿಷ್ಟರಾಗಿ ನುಡಿದ ಆತ್ಮಕಥನ, ವೃಂದಾವನಾಖ್ಯಾನ. 'ಭೂಗೋಳ ವರ್ಣನಂ' ಎಂಬುದು ಆ ಮಹನೀಯರ ಕೃತಿ. ಅದರಲ್ಲಿ ತಾವು ಸ್ವರ್ಗಾದಿ ಲೋಕಗಳಲ್ಲಿ ಸಂಚಾರ ಮಾಡಿ ಬಂದುದನ್ನೂ, ಶ್ವೇತದ್ವೀಪ ಮುಂದಿರದಲ್ಲಿ ಶ್ರೀ ಮನ್ನಾರಾಯಣನಿಂದ ಪುರಸ್ಕೃತರಾದುದನ್ನೂ ತಿಳಿಸಿದ್ದಾರೆ. ಆದುದರಿಂದ, ಅವರ ಕೃತಿಯು ಕೇವಲ ಗ್ರಂಥಾಧಾರಗಳಿಂದಲೇ ರಚಿತವಾದುದಲ್ಲ ; ಸ್ವಾನುಭವದ ಮಾತುಗಳು ಅಲ್ಲಿವೆ.

ಈ ವಾದಿರಾಜ ಗುರು ಸಾರ್ವಭೌಮರು ಯಾವುದೋ ಪುರಾಣ ಕಾಲದವರಲ್ಲ. ವಿಜಯನಗರದ ಸುಪ್ರಸಿದ್ಧ ಚಕ್ರವರ್ತಿ ಕೃಷ್ಣದೇವರಾಯನ ಕಾಲದಲ್ಲಿ ಶ್ರೀ ವ್ಯಾಸರಾಯರ ಶಿಷ್ಯವೃಂದದಲ್ಲಿ ಒಬ್ಬರಾಗಿದ್ದವರು ; ನಮ್ಮ ಕಾಲದವರು. ಈ ಕಾರಣಗಳಿಂದ, ಈ 'ಭೂಗೋಳ ವರ್ಣನೆಯು' ಅತ್ಯಂತ ನಂಬಿಕೆಗೆ ಅರ್ಹವಾದ ಆಪ್ತವಾಕ್ಯ ; ಪರಮ ವೈಜ್ಞಾನಿಕವಾಗಿಯೂ ಇದೆ.

## ಆಧುನಿಕ ವಿಜ್ಞಾನದ ಗೊಂದಲ

ಬ್ರಿಟಿಷರ ಕೊಡುಗೆಯಿಂದಾಗಿ ಈ ಕಾಲದಲ್ಲಿ ಪ್ರಪಂಚದಾದ್ಯಂತ ಆಧುನಿಕ ವಿಜ್ಞಾನಿಗಳ ಮಾತಿಗೆ ಜನ ಹೆಚ್ಚು ಬೆಲೆ ಕೊಡುತ್ತಾರೆ. ಬಾಯಲ್ಲಿ ತಮ್ಮ ತಮ್ಮ

ಶಾಸ್ತ್ರಗಳ ವಿಚಾರವಾಗಿ ಹೇಳಿಕೊಂಡರೂ, ಶಾಸ್ತ್ರ ಸಮ್ಮತವಾದ ಆಚರಣೆಗಳನ್ನು ಅಲ್ಪಸ್ವಲ್ಪ ಉಳಿಸಿಕೊಂಡಿದ್ದರೂ, ಆ ಆಚಾರ ವಿಚಾರಗಳಲ್ಲಿ ಅವರಿಗೆ ನಿಜವಾಗಿಯೂ ನಂಬಿಕೆ ಇದ್ದಂತೆ ಕಾಣುವುದಿಲ್ಲ. ಭಾರತೀಯರ ಉದಾಹರಣೆಯನ್ನು ನೋಡೋಣ. ಧರ್ಮವಿಹಿತಗಳಾದ ಕಾರ್ಯಗಳನ್ನು ಆಚಾರಿಸುವಾಗ "ಶುಭೇ ಶೋಭನೇ ಮುಹೂರ್ತೇ, ಆದ್ಯ ಬ್ರಹ್ಮಣ:, ದ್ವಿತೀಯ ಪರಾರ್ಧೇ, ಶ್ವೇತವರಾಹಕಲ್ಪೇ, ವೈವಸ್ವತ ಮನ್ವಂತರೇ" ಮುಂತಾಗಿ ಸಂಕಲ್ಪ ಮಾಡುತ್ತಾರೆ. ಆದರೆ, ಇಲ್ಲಿ ಹೇಳಿದ ಯಾವ ವಿಚಾರವೂ ಅವರಿಗೀಗ ತಿಳಿಯದು. ಇದರಂತೆ, "ಜಂಬೂದ್ವೀಪೇ, ಭರತ ವರ್ಷೇ, ಭರತಖಂಡೇ, ದಂಡಕಾರಣ್ಯೇ", ಇತ್ಯಾದಿಯಾಗಿಯೂ ಹೇಳುತ್ತಾರೆ. ಆದರೆ ಜಂಬೂದ್ವೀಪದ ವಿಚಾರವನ್ನಾಗಲೀ, ಅದನ್ನು ಸುತ್ತುವರಿದು ಅದರೊಂದಿಗಿರುವ ಸಪ್ತದ್ವೀಪ-ಸಪ್ತ ಸಾಗರಗಳ ವಿಚಾರವನ್ನಾಗಲೀ, ಅವರು ಅರಿಯರು. ಮೇರುಪರ್ವತಕ್ಕೆ ಪ್ರದಕ್ಷಿಣೆಯಾಗಿ ಬರುವ ನವಗ್ರಹಗಳಲ್ಲಿ ಸೂರ್ಯಗ್ರಹವೂ ಒಂದೆಂದು ಬಾಯಲ್ಲಿ ಹೇಳುತ್ತಾರೆ. ಆದರೆ, ಸೂರ್ಯನ ಸುತ್ತಲೂ ಸುತ್ತುವ ಗ್ರಹಗಳಲ್ಲಿ ಭೂಮಿಯೂ ಒಂದು ಗ್ರಹವೆಂದು ಹೇಳುತ್ತಾರೆ. ಇದೆಲ್ಲಾ ಆಧುನಿಕ ವಿಜ್ಞಾನದ ಪರಿಣಾಮ. ಬ್ರಿಟಿಷರ ಆಡಳಿತದ ಕಾಲದಲ್ಲಿ ಅದು ನಮ್ಮ ದೇಶದಲ್ಲಿ ಚೆನ್ನಾಗಿ ಬೇರೂರಿ ನಿಂತುಬಿಟ್ಟಿದೆ.

## 16 ನೇ ಶತಮಾನದ ವಿಚಾರಧಾರೆ

15–16 ನೇ ಶತಮಾನಗಳವರೆಗೆ ಪ್ರಪಂಚದಾದ್ಯಂತ ಮತ ಗ್ರಂಥಗಳಿಗೆ ಪುರಸ್ಕಾರವಿತ್ತು. ಆಗಿನ ಯೂರೋಪಿನ ಜನರಲ್ಲಿ ಬುದ್ಧಿವಂತರು, ಗ್ರೀಕರ ಪ್ರಾಚೀನ ವಿಚಾರಧಾರೆಯಿಂದ ಪ್ರಭಾವಿತರಾಗಿದ್ದವರು, ಬೈಬಲ್ ಪಂಡಿತರು ಹೇಳುತ್ತಿದ್ದ ಮಾತುಗಳಲ್ಲಿ ತಪ್ಪುಗಳನ್ನು ಕಂಡುಹಿಡಿಯಲಾರಂಭಿಸಿದರು. ದೇವರು ಆರೇ ದಿನಗಳಲ್ಲಿ ಪ್ರಪಂಚದ ಸಮಗ್ರ ಸೃಷ್ಟಿಯನ್ನು ಮಾಡಿದನೆಂದೂ, ಪ್ರಪಂಚದ ಸೃಷ್ಟಿಯಾಗಿ ಇಲ್ಲಿಯವರೆಗೆ 6000, ಚಿಲ್ಲರೆ ವರ್ಷಗಳಾಗಿವೆಯೆಂದೂ ಆ ಪಂಡಿತರು ಹೇಳಿದ ಮಾತುಗಳನ್ನು ಬುದ್ಧಿವಂತರಾದ ಲೌಕಿಕರು ನಂಬಲಾರದವರಾದರು. ಅಲ್ಲದೆ, ಭೂಮಿಯು ರೂಪಾಯಿ ನಾಣ್ಯದಂತೆ ಚಪ್ಪಟೆಯಾಗಿರುವುದೆಂದು ಹೇಳಿದ ಮಾತಂತೂ ಹಾಸ್ಯಾಸ್ಪದವಾಗಿ ಕಂಡಿತು. ಏಕೆಂದರೆ, ಕೋಪರ್ನಿಕಸ್ ಮೊದಲಾದ ವಿಜ್ಞಾನಿಗಳು ಭೂಮಿಯು ಗೋಳಾಕಾರವಾಗಿರುವುದೆಂದೂ, ಅದರ ಸುತ್ತಳತೆ ಸುಮಾರು 4 ಕೋಟಿ ಮೀಟರುಗಳೆಂದೂ (25,000 ಮೈಲಿ) ಸಕಾರಣವಾಗಿ ನಿರ್ಧರಿಸಿ ಬಿಟ್ಟಿದ್ದರು.

ಭೂಪಟದ ಶಾಸ್ತ್ರಜ್ಞರು ಜಗತ್ತಿನ ಸೃಷ್ಟಿಯಾಗಿ 432 ಕೋಟಿ ವರ್ಷಗಳಾಗಿವೆಯೆಂದು ಕಂಡುಹಿಡಿದರು. ಚಾರ್ಲ್ಸ್ ಡಾರ್ವಿನ್ ಮೊದಲಾದ ವಿಜ್ಞಾನಿಗಳು ಜಗತ್ತಿನ ಸೃಷ್ಟಿಯಾದಮೇಲೆ, ಎಷ್ಟೋ ಕಾಲದ ನಂತರ ನೀರಿನಲ್ಲಿ ಜೀವಿಗಳ ಆವಿರ್ಭಾವವಾಗಿ, ಅಣು ಜೀವಿಯಿಂದ ಮಾನವನವರೆಗೆ ವಿಕಾಸ ಹೊಂದಲು ಕೋಟಿಗಟ್ಟಲೆ ವರ್ಷಗಳು ಕಳೆದು ಹೋಗಿವೆಯೆಂದು ತರ್ಕಬದ್ಧವಾಗಿ ವಾದಿಸಿದರು. ಎಲ್ಲಕ್ಕಿಂತಲೂ ಹೆಚ್ಚಾಗಿ, ಮತ ಗ್ರಂಥದಲ್ಲಿ ನಂಬಿಕೆಯನ್ನು ಕಳೆದುಕೊಂಡ ಅವರು, ದೇವರಿಂದ ಸೃಷ್ಟಿಯಾಯಿತೆಂಬ ಮಾತನ್ನೇ ಕೈಬಿಟ್ಟು, ಇದ್ದ ಮೂಲ ವಸ್ತುವೊಂದು ಹೇಗೋ ಸ್ಫೋಟಗೊಂಡು, ಜಗದ್ವಸ್ತುಗಳ ಸೃಷ್ಟಿಯಾಯಿತೆಂದು ಹೇಳಲಾರಂಭಿಸಿದರು.

## ಗೊಂದಲಕ್ಕೆ ಕಾರಣ

ಆದರೆ, ಆ ಬುದ್ಧಿವಂತ ಜನರು ಭಾರತದ ವೇದ ಶಾಸ್ತ್ರಗಳನ್ನೂ, ತದನುಸಾರಿ ಗ್ರಂಥಗಳನ್ನೂ ನೋಡಿದವರಲ್ಲ. ಅವರ ವಾದಗಳು ಭಾರತದಲ್ಲಿ ಹರಡಿದಾಗ, ಗೌತಮರ ಶಾಪದಿಂದಲೂ, ಕಲಿಯುಗದ ಕಶ್ಮಲದಿಂದಲೂ ಕಲುಷಿತವಾದ ಬುದ್ಧಿಯುಳ್ಳ ಭಾರತೀಯರು, ಆ ವಾದಗಳನ್ನು ಹೆಚ್ಚಾಗಿ ಪ್ರತಿಭಟಿಸಲಿಲ್ಲ. ಜನ ಸಾಮಾನ್ಯರು ಲೌಕಿಕ ಆಶಾಪಾಶಬದ್ಧರಾಗಿ, ಬ್ರಿಟಿಷರು ಹಬ್ಬಿಸಿದ ಪಾಶ್ಚಾತ್ಯ ವಿದ್ಯೆಗೇ ಶರಣು ಹೊಡೆದು, ತಮ್ಮದನ್ನೆಲ್ಲಾ ಮರೆತುಬಿಟ್ಟರು. ಆದರೂ, ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ಪ್ರಾಚೀನ ವಿದ್ಯೆಯ ಉಳಿವಿಗಾಗಿ ಹೆಣಗಾಡುತ್ತಿದ್ದರು. ಈಗ ಭಾರತೀಯ ವಿದ್ಯೆಗಳ ಪುನರುಜ್ಜೀವನಕ್ಕೆ ಒಳ್ಳೆಯ ಕಾಲ ಬಂದಂತಿದೆ. ಆ ವಿದ್ಯೆಗಳ ಮಹತ್ವವನ್ನು ನಾವೀಗ ಜಗತ್ತಿಗೆ ಎತ್ತಿ ತೋರಿಸಬೇಕಾಗಿದೆ.

## ದೈವ ವಾಣಿಗಳು ಸುಳ್ಳಲ್ಲ

ಆಧುನಿಕ ವಿಜ್ಞಾನಿಗಳು ಬುದ್ಧಿವಂತರೇ ನಿಜ. ಆದರೆ, ಭಾರತದ ವಿದ್ಯಾ ಸಂಪತ್ತಿನ ಕಡೆಗೆ ಗಮನ ಹರಿಸಿ ಅವರು ತಮ್ಮನ್ನು ತಿದ್ದಿಕೊಳ್ಳಬೇಕಾಗಿದೆ. ಬೈಬಲ್ ಗ್ರಂಥ, ಕುರಾನ್ ಮೊದಲಾದ ದೈವ ವಾಣಿಗಳು ಸಂಗ್ರಹವಾಗಿ, ಸೂತ್ರ ಪ್ರಾಯವಾಗಿವೆ. ಅವುಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದಿದ್ದರೆ, ವಿಜ್ಞಾನಿಗಳ ಟೀಕೆಗಳಿಗೆ ಗುರಿಯಾಗಬೇಕಾಗುತ್ತದೆ. ಈ ವಿಷಯದಲ್ಲಿ ಬೈಬಲ್ ವಾಣಿಯ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ನಮ್ಮ ಪುರಾಣಗಳ ಪ್ರಕಾರ ಒಬ್ಬೊಬ್ಬ ಮನುವಿನ ಆಯುರ್ಮಾನ 100 ವರ್ಷಗಳು. ನಮ್ಮ 302400 ವರ್ಷಗಳು ಮನುಗಳಿಗೆ ಒಂದೊಂದು ವರ್ಷ. ಸ್ವಾಯಂಭುವ ಮನುವಿನಿಂದ ಹಿಡಿದು

ಇಲ್ಲಿಯವರೆಗೆ 6 ಮನ್ವಂತರಗಳು ಕಳೆದು, ಈಗ ಏಳನೆಯ ವೈವಸ್ವತ ಮನ್ವಂತರವು ನಡೆಯುತ್ತಿದೆ. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಯೋಚಿಸಿದಾಗ, ಆರು ದಿನಗಳು ಎಂದರೆ ಆರು ಮನ್ವಂತರಗಳು. ಆರು ಮನುಗಳ 6000 ವರ್ಷಗಳೊಂದಿಗೆ ಈಗಿನ ಮನ್ವಂತರದ 27 ಚತುರ್ಯುಗಗಳನ್ನೂ, 28 ನೇ ಕಲಿಯುಗದ ಇಂದಿನ ತನಕ ಆಗಿರುವ ಕಾಲವನ್ನೂ ಗಣನೆಗೆ ತೆಗೆದುಕೊಂಡರೆ, ಕ್ರಿ.ಶ. 1991 ನೇ ವರ್ಷದ ಹೊತ್ತಿಗೆ 197, 29, 49092 ವರ್ಷಗಳಾಗಿರುವುದು ತಿಳಿಯುವುದು. ಈ ಎಣಿಕೆಯನ್ನು ಪ್ರತಿ ವರ್ಷ ನಮ್ಮ ಪಂಚಾಂಗಗಳಲ್ಲಿ ಕಾಣಬಹುದು. ಚತುರ್ಮುಖ ಬ್ರಹ್ಮನ 51 ನೇ ವರ್ಷದ ಪದ್ಮಕಲ್ಪವೆಂಬ ಮೊದಲನೇ ದಿವಸದ ಅವಧಿ 4320000000 ವರ್ಷಗಳು; ಅಷ್ಟೇ ಕಾಲದ ರಾತ್ರಿ ಕಳೆದಮೇಲೆ, ಎರಡನೇ ದಿವಸವಾದ ಈ ಶ್ವೇತವರಾಹ ಕಲ್ಪದಲ್ಲಿ ಆರು ಮನ್ವಂತರಗಳು ಕಳೆದು, ಏಳನೇ ಮನ್ವಂತರ ನಡೆಯುತ್ತಿದೆ.

ಇದುವರೆಗೆ ಹೇಳಿದಷ್ಟೇ ವಿಚಾರಗಳನ್ನು ಗಮನಿಸಿದರೂ ಕೂಡ, ಮತ ಗ್ರಂಥಗಳು ವೈಜ್ಞಾನಿಕವಾಗಿಯೇ ಇವೆ ಎಂಬುದು ಸ್ಪಷ್ಟವಾಗುತ್ತದೆ.

ಈಗ ಜೀವಸೃಷ್ಟಿಯ ವಿಚಾರವನ್ನೂ, ಭೂಗೋಳದ ವಿಚಾರವನ್ನೂ ಪರಿಶೀಲಿಸಿ ನೋಡೋಣ.

## ಜೀವಿಗಳ ಸೃಷ್ಟಿ

ಜೀವಿಗಳ ಸೃಷ್ಟಿ ಹೇಗಾಯಿತೆಂಬುದನ್ನು ಆಧುನಿಕ ವಿಜ್ಞಾನಿಗಳು ಅರಿಯದವರಾಗಿದ್ದಾರೆ. ಅದು ತನಗೆ ತಿಳಿಯದೆಂದು ವಿಕಾಸವಾದಿ ಡಾರ್ವಿನ್ನನ್ನೇ ಒಪ್ಪಿಕೊಂಡಿದ್ದಾನೆ. 'ನೀರಿನಲ್ಲಿ ಮೊಟ್ಟ ಮೊದಲು ಅಣುವಿನಂತಹ ಜೀವಿಗಳು ಕಾಣಿಸಿಕೊಂಡುವು. ಸನ್ನಿವೇಶ ಮತ್ತು ವಾತಾವರಣಗಳ ಪ್ರಭಾವದಿಂದ ಅವು ಗಾತ್ರದಲ್ಲಿಯೂ ಆಕಾರದಲ್ಲಿಯೂ ವ್ಯತ್ಯಾಸಗಳನ್ನು ಹೊಂದಲಾರಂಭಿಸಿದುವು. ಹಂತಹಂತವಾಗಿ ಜಲಚರಗಳು, ಸರೀಸೃಪಗಳು, ಪಕ್ಷಿಗಳು, ಮೃಗಗಳು, ಸಸ್ತನಿ ಪ್ರಾಣಿಗಳು, ಮಂಗಗಳು, ಮಾನವರು ಮುಂತಾದ ವ್ಯತ್ಯಾಸಗಳು ಕಾಣಿಸಿಕೊಂಡವು. ಇಷ್ಟೆಲ್ಲಾ ಆಗಲು ಕೋಟಿಗಟ್ಟಲೆ ವರ್ಷಗಳ ಅವಧಿ ಬೇಕಾಯಿತು.' ಹೀಗೆಂದು ವಿಕಾಸವಾದಿಗಳು ಊಹಿಸಿದ್ದಾರೆ. ದೈವ ಸೃಷ್ಟಿಯಲ್ಲಿ ನಂಬಿಕೆಯನ್ನು ಕಳೆದುಕೊಂಡ ಅವರು ಹೀಗೆಲ್ಲಾ ಊಹಿಸಬೇಕಾಯಿತು. ಅದಕ್ಕಾಗಿ ಬಗೆಬಗೆಯ ಪ್ರಾಣಿಗಳ ಲಕ್ಷಣಗಳನ್ನೂ, ಕಾಲಾಂತರಗಳ ಪ್ರಾಣಿಜೀವನದ ಅವಶೇಷಗಳನ್ನೂ ಶೋಧಿಸಿನೋಡಿ ಅವರು ಬಹಳ ಕಷ್ಟಪಟ್ಟಿದ್ದಾರೆ.

ಆದರೆ, ಅವರು ಶ್ರೀಮದ್ಭಾಗವತಾದಿ ನಮ್ಮ ಪುರಾಣಗಳನ್ನು ನೋಡಿದ್ದಿದ್ದರೆ ಇಷ್ಟು ಕಷ್ಟಪಟ್ಟು ಊಹೆಗಳ ಸರಮಾಲೆಯನ್ನು ಕಟ್ಟಬೇಕಾಗಿರಲಿಲ್ಲ. ನಮ್ಮ ಶಾಸ್ತ್ರಗಳ ಪ್ರಕಾರ ಜೀವರಂತೆ ಜೀವರೂ ನಿತ್ಯರಾಗಿದ್ದಾರೆ; ಪ್ರಕೃತಿ, ಪ್ರಣವ, ಕಾಲಗಳೂ ನಿತ್ಯವಸ್ತುಗಳಲ್ಲಿ ಸೇರಿವೆ. ಅನಾದಿಯಿಂದ ಅಜ್ಞಾನಬದ್ಧರಾದ ಜೀವಿಗಳ ಅಜ್ಞಾನ ನಿಮಿತ್ತವಾದ ಕರ್ಮ ಬಂಧನವನ್ನು ಬಿಡಿಸಿ, ಅವರವರ ಸ್ವರೂಪ ಶಕ್ತಿಗಳು ಅನುಭವಕ್ಕೆ ಬರುವಂತೆ ಮಾಡಲು ಸರ್ವಜ್ಞನೂ ಸರ್ವಶಕ್ತನೂ ಆದ ಭಗವಂತ, ಜಗತ್ತನ್ನು ಸೃಷ್ಟಿಸಿ ಜೀವಿಗಳಿಗೆ ಪ್ರಕೃತಿ ಸಂಬಂಧವಾದ ದೇಹಗಳನ್ನು ಕೊಟ್ಟು, ಜನ್ಮ ಜನ್ಮಾಂತರಗಳ ಅಭ್ಯಾಸದಿಂದ ಅವರು ತಮ್ಮ ಸ್ವರೂಪ ಸ್ಥಿತಿಗಳನ್ನು ಪಡೆಯುವಂತೆ ಮಾಡುತ್ತಾನೆ.

ಜೀವರು ಸ್ವರೂಪತಃ 84 ಲಕ್ಷ ಬಗೆಗಳುಳ್ಳವರಾಗಿದ್ದಾರೆ. ಸಾಮಾನ್ಯ ಜೀವಿಗಳ ಸ್ವಭಾವ ಶಕ್ತಿಗಳು ಅಲ್ಪ; ಮಾನವ ಜಾತಿಯ ಶಕ್ತಿ ಅಪಾರ. ಅದನ್ನೂ ಮೀರಿದುವು ದೈವೀ ಶಕ್ತಿಗಳು. ಮಾನವ ಜೀವಿಗಳೂ, ದೇವತಾ ವರ್ಗದ ಜೀವಿಗಳೂ ತಮ್ಮ ತಮ್ಮ ಸ್ವರೂಪ ಸಾಮರ್ಥ್ಯಗಳ ಬಳಕೆಯನ್ನು ಪಡೆದುಕೊಳ್ಳಬೇಕಾದರೆ ಎಲ್ಲಾ ಬಗೆಯ ಜೀವ ಸ್ವಭಾವಗಳನ್ನೂ ಅವರು ತಿಳಿದವರಾಗಿರಬೇಕು; 84 ಲಕ್ಷ ಯೋನಿಗಳಲ್ಲಿ ಅನೇಕ ಬಾರಿ ಜನ್ಮಗಳನ್ನು ಹೊಂದಿ ಅನುಭವಶೀಲರಾಗಬೇಕು. ಅಣು ಜೀವಿಗಳಿಗೂ, ತೃಣಜೀವಿಗಳಿಗೂ ಅನುಭವಕ್ಕೆ ಹೆಚ್ಚುಕಾಲ ಬೇಕಾಗುವುದಿಲ್ಲ. ಮೇಲ್ಮಟ್ಟದ ಪ್ರಾಣಿಗಳಿಗೂ ಮಾನವ ಜೀವರಿಗೂ ಹೆಚ್ಚು ಹೆಚ್ಚು ಕಾಲ ಬೇಕಾಗುವುದು. ಮನುಷ್ಯೋತ್ತಮ ಜೀವರು ಅರ್ಧ ಬ್ರಹ್ಮ ಕಲ್ಪದಷ್ಟು ಕಾಲದಲ್ಲಿಯೂ, ಮನುಷ್ಯ ಗಂಧರ್ವರು ಒಂದು ಬ್ರಹ್ಮ ಕಲ್ಪದಷ್ಟು ಕಾಲದಲ್ಲಿಯೂ ತಮ್ಮ ಸ್ವಭಾವ ಸಾಮರ್ಥ್ಯಗಳನ್ನು ಬಗೆಬಗೆಯ ಅಭ್ಯಾಸಗಳಿಂದ ಕಂಡುಕೊಳ್ಳುವರು [ಬ್ರಹ್ಮ ಕಲ್ಪ ಎಂದರೆ ಸೃಷ್ಟಿಕರ್ತನೆನಿಸುವ ಜೀವಶ್ರೇಷ್ಠನ ಬಾಳುವೆಯ ನೂರು ವರ್ಷಗಳಷ್ಟು ಕಾಲ – $864,0000000 \times 360 \times 100$] ದೇವ ಗಂಧರ್ವರಿಗೆ ಎರಡು ಬ್ರಹ್ಮ ಕಲ್ಪಗಳ ಅವಧಿಬೇಕು. ಹೀಗೆಯೇ ಮೇಲೆ ಮೇಲಿನ ಹಂತದವರ ವಿಚಾರವನ್ನು ನೋಡುತ್ತಾ ಹೋದರೆ, ಬ್ರಹ್ಮ ಪದವಿಗೆ ಬರುವ ಜೀವರಿಗೆ 200 ಬ್ರಹ್ಮ ಕಲ್ಪಗಳ ಸಾಧನೆ ಅವಶ್ಯಕವೆಂದು ವೈದಿಕ ಗ್ರಂಥಗಳಾದ ಪುರಾಣಗಳಿಂದ ತಿಳಿದು ಬರುವುದು.

ಸರ್ವೋತ್ತಮನೂ, ಸ್ವತಂತ್ರನೂ, ಸರ್ವ ಸಮರ್ಥನೂ ಆದ ಭಗವಂತ, ದೈವೀ ಜೀವಿಗಳಲ್ಲಿ ಹಿರಿಯ ವರ್ಗಗಳವರ ಮುಖಾಂತರ ಜೀವ ಸೃಷ್ಟಿಯನ್ನು

ಮಾಡುತ್ತಾನೆ. ಹಾಗೆ ಮಾಡುವುದು ಅವರ ಅಭ್ಯಾಸಕ್ಕಾಗಿಯೇ ಹೊರತು ತನಗೆ ಸಹಾಯ ಬೇಕೆಂಬ ಕಾರಣದಿಂದಲ್ಲ. ಜೀವಸೃಷ್ಟಿ ಎಂದರೆ, ನಿತ್ಯರಾಗಿದ್ದು ಅಜ್ಞಾನ ಬಂಧನದಿಂದ ಬಿಡುಗಡೆ ಹೊಂದಬೇಕಾದ ಜೀವರಿಗೆ ಸಾಧನ ಶರೀರಗಳನ್ನು ಕೊಡುವುದೇ ಹೊರತು ಜೀವರನ್ನೇ ಹೊಸದಾಗಿ ಸೃಷ್ಟಿಸುವುದಲ್ಲ.

## ಭಗವಂತನಿಂದ ಜೀವಿಗಳ ಸೃಷ್ಟಿ

ಭಗವಂತನು ನಡೆಸುವ ಸೃಷ್ಟಿ ಕ್ರಮವನ್ನು ಪರಿಶೀಲಿಸಿದರೆ, ಡಾರ್ವಿನ್ನನೆಷ್ಟು ಬುದ್ಧಿವಂತ ಎಂಬುದೂ, ಜೊತೆಜೊತೆಗೆ ನಮ್ಮ ಶಾಸ್ತ್ರಗಳ ಪರಿಚಯವಿಲ್ಲದ ಅವನು ಎಂತಹ ನತದೃಷ್ಟ ಎಂಬುದೂ ತಿಳಿದುಬರುತ್ತದೆ. ಅವನ ಊಹೆಗಳು ಕಾಲದ ಮಿತಿಗಳ ದೃಷ್ಟಿಯಿಂದ ಸಮರ್ಪಕವೇ ಆದರೂ, ತಾತ್ತ್ವಿಕ ದೃಷ್ಟಿಯಿಂದ ಅದು ತಪ್ಪು. ಈಗಿನ ಹೊಂಡು ವಿಜ್ಞಾನಿಗಳು ಹೇಳುವಂತೆ ಕೇವಲ ಭೌತಿಕ, ರಾಸಾಯನಿಕ ಪರಿಣಾಮಗಳಿಂದಲೇ ತಿಳಿವಳಿಕೆಯುಳ್ಳ ಜೀವಿಗಳ ಸೃಷ್ಟಿ ಆಗುವುದಿಲ್ಲ. ಪ್ರಾಣ ಶಕ್ತಿಯ ಆಟದವರೆಗೂ ಅವರು ಹೇಳುವುದು ಸರಿ; ಭೌತಿಕ ಕಾರಣಗಳಿಂದಲೇ ತಿಳಿವಳಿಕೆ, ಭಾವಾನುಭವ ಮುಂತಾದುವು ಸೃಷ್ಟವಾಗುತ್ತವೆ ಎಂದು ಆಧಾರವಿಲ್ಲದೆ ವಾದಿಸುವುದು ವಿಜ್ಞಾನಿಗಳೆಂಬ ಹೆಸರಿಗೇ ದ್ರೋಹವೆಸಗಿದಂತೆ !

ನರಮಂಡಲದವರೆಗಿನ ಎಲ್ಲಾ ಭೌತ ಸೃಷ್ಟಿಯೂ ಜ್ಞಾನ ಸಾಧನವೇ ಹೊರತು ಅದೇ ಜ್ಞಾನವಲ್ಲ. ಅವುಗಳ ಉಪಯೋಗವನ್ನು ಪಡೆಯುವ ಜ್ಞಾನಸ್ವರೂಪಿ ಜೀವ, ನಿತ್ಯ. ಭಗವಂತ, ಜೀವರ ತಿಳಿವಳಿಕೆಗೆ ಬೇಕಾದ ಎಲ್ಲಾ ಅಂಶಗಳನ್ನೂ, ಸೂಕ್ಷ್ಮ ಜೀವಿಗಳಲ್ಲಿಯೂ ಕೂಡ ಸೂಕ್ಷ್ಮ ರೂಪದಲ್ಲಿ ಅಳವಡಿಸಿರುತ್ತಾನೆ. ಸಾಧನೆಯು ಮುಂದುವರಿದಂತೆಲ್ಲಾ ಜ್ಞಾನ ಸಾಧನಗಳೂ, ಕ್ರಿಯಾ ಸಾಧನಗಳೂ ಹೆಚ್ಚು ಹೆಚ್ಚು ಸ್ಫುಟವಾಗಿ ವಿಸ್ತಾರಗೊಂಡ ದೇಹಗಳನ್ನು ಕೊಡುತ್ತಾನೆ.

ಶ್ರೀಮದ್ಭಾಗವತದ ಎರಡನೇ, ಮೂರನೇ ಸ್ಕಂಧಗಳ ಪರಿಚಯವುಳ್ಳವರಿಗೆ ಭಗವಂತನ ಸೃಷ್ಟಿಕ್ರಮ ವೇದ್ಯವಾಗುತ್ತದೆ. ಅಣು ಜೀವಿಗಳಿಂದ ಹಿಡಿದು ಮಾನವರ ಸೃಷ್ಟಿಯಾಗುವ ವರೆಗೆ 8400000 ಹಂತಗಳಿರುವುದು ನಿಜವಾದರೂ, ಅದನ್ನು ಏಳು ವರ್ಗಗಳಲ್ಲಿ ಸಂಗ್ರಹಿಸಿ ಹೇಳಲಾಗಿದೆ. ಅಂಭೃಣೀ ಸೂಕ್ತದಲ್ಲಿ " ಮಮ ಯೋನಿ : ಅಪ್ಸ್ವಾ ಅಂತಸ್ಸಮುದ್ರೇ " ಎಂದು ಹೇಳಿರುವಂತೆ, ಸೃಷ್ಟಿಯ

ಆರಂಭದಲ್ಲಿ ಅಣು ಜೀವಿಗಳ ಶರೀರಗಳ ಸೃಷ್ಟಿಯಾದುದು ನೀರಿನಲ್ಲಿ. ನಂತರದ ಸೃಷ್ಟಿಯ ಕ್ರಮ ಹೀಗೆ—ಜಲ ಚರಗಳು, ಸರೀಸೃಪಗಳು, ಪಕ್ಷಿಗಳು, ಮೃಗಗಳು, ಸಸ್ತನಿಗಳು, ಕುದುರೆ ಗೋವೃಗಳಂತಹ ಉತ್ತಮ ಪಶುಗಳು, ಮಾನವರು. ಈ ಏಳು ಹಂತಗಳ ಸೃಷ್ಟಿಯಾಗಲು ಹಿಡಿಸಿದ ಕಾಲ, ಚತುರ್ಮುಖನ 51 ನೇ ವರ್ಷದ ಮೊದಲ ಹಗಲೆನಿಸಿದ ಪದ್ಮ ಕಲ್ಪ - 432,0000000 ವರ್ಷಗಳ ಅರ್ಧದಷ್ಟು ಕಾಲ.

ಈಗಿನ ವಿಜ್ಞಾನಿ ಸಂಶೋಧಕರನ್ನು ಕಂಗೆಡಿಸುತ್ತಿರುವ ಒಂದು ಅಂಶವೆಂದರೆ, ಆಫ್ರಿಕಾಖಂಡದ ಭೂಪದರಗಳಲ್ಲಿ ಹೆಚ್ಚು ವಿಕಾಸ ಹೊಂದಿರದ ಮತ್ತು ಪೂರ್ಣ ವಿಕಾಸ ಹೊಂದಿದ ಶರೀರಗಳ ಗುರುತುಗಳು ಪಕ್ಕ ಪಕ್ಕದಲ್ಲಿಯೇ ಕಂಡು ಬಂದಿರುವುದು. ಇಂತಹ ವಿಚಿತ್ರಗಳನ್ನು ಕಂಡು ಅವರು ಚಿತ್ರ ವಿಚಿತ್ರವಾಗಿ ಊಹೆಗಳನ್ನು ಕಟ್ಟಬಹುದು. ಆದರೆ, ನಿಜಸ್ಥಿತಿ ಬೇರೆಯೇ ಆಗಿದೆ. ಪದ್ಮಕಲ್ಪದಲ್ಲಿ ದೇಹಗಳ ಸೃಷ್ಟಿಯು ಹಂತ ಹಂತವಾಗಿ ನಡೆದಿರಲು, ಈಗ ನಡೆಯುತ್ತಿರುವ ಶ್ವೇತವರಾಹ ಕಲ್ಪದಲ್ಲಿ, ಕಶ್ಯಪ ಮಹರ್ಷಿಗಳಿಂದ ಅವರ ಅನೇಕವಂದಿ ಪತ್ನಿಯರ ದೆಸೆಯಿಂದ ಎಲ್ಲಾ ಬಗೆಯ ದೇಹಗಳ ಸೃಷ್ಟಿಯೂ, ಸ್ವಲ್ಪ ಹೆಚ್ಚು ಕಡಿಮೆ, ಏಕಕಾಲದಲ್ಲಿಯೇ ಆಗಿಬಿಟ್ಟಿದೆ. ಇದರಲ್ಲಿ ವಿಕಾಸ ಹಂತಗಳ ಅಂತರವಿಲ್ಲ.

## ವಿಶ್ವದ ಸೃಷ್ಟಿ

ವಿಶ್ವದ ಸೃಷ್ಟಿಯ ವಿವರಗಳನ್ನು ಪುರಾಣಗಳಿಂದ ತಿಳಿಯುವಾಗಲೂ ಕೂಡ, ಅತಿ ಬುದ್ಧಿವಂತರಾದ ಈಗಿನ ವಿಜ್ಞಾನಿಗಳು ನಿಜಸ್ಥಿತಿಗೆ ಎಷ್ಟು ಸಮೀಪ ಬಂದಿದ್ದಾರೆ, ಆದರೂ ಹೇಗೆ ಜಾರಿ ಬೀಳುತ್ತಿದ್ದಾರೆ ಎಂಬುದು ಗೊತ್ತಾಗುತ್ತದೆ.

ಅವರು ಹೇಳುವಂತೆ, 'ಆಕಾಶದಲ್ಲಿ ಮೋಡದಂತಹ ಮೂಲವಸ್ತುವಿದ್ದಿತು. ಯಾವುದೋ ಕಾರಣದಿಂದ ಅದರಲ್ಲಿ ಕಾವು ಉಂಟಾಗಿ ಅದು ಸಿಡಿಯಿತು. ದೊಡ್ಡ ಸಣ್ಣ ತುಣುಕುಗಳಾಗಿ ದೂರ ದೂರ ಸರಿದ ವಸ್ತುಗಳು, ಅತಿವೇಗದಿಂದ ಚಲಿಸುತ್ತಾ, ಪರಸ್ಪರ ಆಕರ್ಷಕ ಶಕ್ತಿಗಳಿಂದ ನಕ್ಷತ್ರಗಳಾಗಿಯೂ, ಗ್ರಹಗಳಾಗಿಯೂ ಭ್ರಮಿಸುತ್ತಿವೆ.' ಸಿಡಿದಿರುವುದು ನಿಜ ; ಆದರೆ, ಏಕೆ, ಹೇಗೆ ಎಂಬುದು ಅವರಿಗೆ ತಿಳಿಯದು. ವಿಶ್ವದ ಎಲ್ಲಾ ವ್ಯಾಪಾರಗಳೂ ಕೆಲವು ಬಗೆಯ ಶಕ್ತಿ ವಿಶೇಷಗಳಿಂದ ನಡೆಯುತ್ತಿವೆಯೆಂದೂ, ಅವುಗಳು ಕ್ರಮಬದ್ಧವಾಗಿ ಕಾರ್ಯಕ್ಷೇತ್ರಗಳಲ್ಲಿ

ಭಾಗವಹಿಸುವಂತೆ ಮಾಡಬಲ್ಲ ನಾಯಕ ಶಕ್ತಿ ಯಾವುದೋ ಅದು ತಿಳಿಯದೆಂದೂ ಹೇಳುತ್ತಾರೆ. ಇದೆಂತಹ ವಿಜ್ಞಾನ! ಇದನ್ನು ನಂಬಬೇಕಂತೆ; ಪುರಾಣಗಳು ಕಲ್ಪನಾ ವಿಲಾಸಗಳೆಂದು ಕೈ ಬಿಡಬೇಕಂತೆ!

ಪುರಾಣಗಳಲ್ಲಿ ಹೇಳಿರುವ ಸೃಷ್ಟಿಯ ವಿಚಾರ ಎಷ್ಟು ಕ್ರಮಬದ್ಧವಾಗಿದೆ, ಪರಿಪೂರ್ಣ ವೈಜ್ಞಾನಿಕವಾಗಿದೆ ಎಂಬುದನ್ನು ಈಗ ನೋಡೋಣ.

ಪ್ರತಿ ಬ್ರಹ್ಮಕಲ್ಪದ ಕೊನೆಯಲ್ಲಿಯೂ, ಸೃಷ್ಟವಾದ ವಸ್ತುಗಳನ್ನೆಲ್ಲಾ ಮೂಲ ವಸ್ತುವಿನಲ್ಲಿ ಅಡಗಿಸಿ, ಸಾಧಕ ಜೀವರನ್ನು ಹಿರಿಯ ಜೀವರ ಶರೀರದಲ್ಲಿ ಕೂಡಿಸಿ, ಎಲ್ಲವನ್ನೂ ತನ್ನ ಉದರದಲ್ಲಿಟ್ಟುಕೊಂಡು, ಕೇವಲ ಲಕ್ಷ್ಮೀಸ್ವರೂಪವಾದ ಪ್ರಳಯೋದಕದಲ್ಲಿ, ಭೂದೇವೀರೂಪವಾದ ಆಲದೆಲೆಯ ಮೇಲೆ, ಬಾಲರೂಪದಿಂದ ಭಗವಂತ ಶಯನಿಸುತ್ತಾನೆ.

ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯಂತಂ ।
ವಟಸ್ಯಪತ್ರಸ್ಯ ಪುಟೇ ಶಯಾನಂ ಬಾಲಂ ಮುಕುಂದಂ ಮನಸಾ ಸ್ಮರಾಮಿ ॥

ಶ್ರೀದೇವಿಯು ತನ್ನ ದುರ್ಗಾರೂಪದಿಂದ ಕತ್ತಲೆಯ ಪರದೆಯನ್ನು ಸುತ್ತಲೂ ಕಟ್ಟಿರುತ್ತಾಳೆ. ಬ್ರಹ್ಮನ ನೂರು ವರ್ಷಗಳ ಅವಧಿಯಷ್ಟು ಈ ಮಹಾ ಪ್ರಳಯದ ಕಾಲ.

## ಆತ್ಮ ಸೃಷ್ಟಿ

ಈ ಪ್ರಳಯದ ರಾತ್ರಿ ಮುಗಿಯುತ್ತಿರಲು, ಶ್ರೀ ದೇವಿಯು ಮೊದಲೇ ಎಚ್ಚರಗೊಂಡು, ಶ್ರುತಿ ಗೀತೆಯಿಂದ ಪತಿಯನ್ನು ಸ್ತುತಿಸುತ್ತಾ, ಇನ್ನೊಮ್ಮೆ ಸೃಷ್ಟಿಯನ್ನು ಪ್ರಾರಂಭಿಸಬೇಕೆಂದು ಎಚ್ಚರಗೊಳಿಸುವಳು. ಭಗವಂತ, ಎಚ್ಚರಗೊಂಡವನಂತೆ ನಟಿಸಿ, ನಾರಾಯಣ ರೂಪವನ್ನು ತಾಳುವನು. ಆರೂಪದಿಂದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳು ಹೊರಬರುವುವು. ಆ ಭಗವಂತನ ಬಲದಿಂದ ಶ್ರೀದೇವಿಯು ಆ ನಾಲ್ಕು ರೂಪಗಳಿಗೆ ಅನುಗುಣವಾಗಿ ಮಾಯಾ, ಜಯಾ, ಕೃತಿ, ಶಾಂತಿ ಎಂಬ ರೂಪಗಳನ್ನು ಧರಿಸಿರುವಳು. ಭಗವಂತನ ರೂಪಗಳು ದೀಪದಿಂದ ದೀಪಗಳು ಬಂದಂತೆ ಪ್ರಕಟವಾಗುವುದಕ್ಕೆ ಆತ್ಮಸೃಷ್ಟಿ ಎಂದು ಹೆಸರು. ಭಗವಂತನ ಐದು ರೂಪಗಳು ಪರಸ್ಪರ ಕ್ರಮವಾಗಿ ಬೆರೆತು ಮೂವತ್ತು ರೂಪಗಳಾಗುವುವು; ಬರಬರುತ್ತಾ ಅನಂತ ರೂಪಗಳಾಗುವುವು, ಇದರಂತೆ ಶ್ರೀ ದೇವಿಯ ರೂಪಗಳೂ ಕೂಡ.

## ಪ್ರಾಕೃತ ಅಥವ ಸೂಕ್ಷ್ಮಸೃಷ್ಟಿ

ಭಗವಂತನುದರದಲ್ಲಿದ್ದ ಮೂಲ ಪ್ರಕೃತಿಯಲ್ಲಿ ಶುದ್ಧ ಸತ್ವ ಮತ್ತು ಶುದ್ಧ ತಮ ಎಂಬ ಎರಡು ಜಡಗುಣಗಳು ಅವ್ಯಕ್ತವಾಗಿ, ಪರಸ್ಪರ ಬೆರೆತುಕೊಳ್ಳದೆ ಸಮ ಸ್ಥಿತಿಯಲ್ಲಿರುವುವು. ಭಗವಂತನಿಚ್ಛೆಯಿಂದ ಶ್ರೀ ದೇವಿಯು ತನ್ನ ದುರ್ಗಾರೂಪ ವನ್ನೂ ಕೂಡಿಕೊಂಡು ಆ ಎರಡು ಗುಣಗಳು ಪರಸ್ಪರ ಬೆರೆತುಕೊಳ್ಳುವಂತೆ ಕದಡು ವಳು. ಇದಕ್ಕೆ ಕ್ಷೋಭೆ ಎಂದು ಹೆಸರು, ಈ ಭೌತ ಮಿಶ್ರಣದಿಂದಾಗಿ ತಮೋ ಗುಣದೊಳಗಿನ ಹಳದಿ, ಕೆಂಪು ಮತ್ತು ನೀಲ ವರ್ಣದ ಪರಮಾಣುಗಳು ಮಿಶ್ರ ವರ್ಣವಾಗಿ ರಂಜಿಸುವುವು; ಇದು ಶಬಲ ಎನಿಸಿಕೊಳ್ಳುತ್ತದೆ. ಶ್ರೀ ದೇವಿಯು ಭೂರೂಪದಿಂದ ಕೆಂಪು ವರ್ಣದ ರಜೋ ಗುಣಕ್ಕೆ ಅಭಿಮಾನಿ. ದುರ್ಗಾ ಎಂಬುದು ತಮೋಗುಣಕ್ಕೆ ಅಭಿಮಾನಿ ರೂಪ. ಹಳದಿಯ ಸತ್ವಕ್ಕೆ ಶ್ರೀದೇವಿ.

ಮೊಟ್ಟಮೊದಲಿಗೆ ಈ ಮೂವರು ಅಭಿಮಾನಿಗಳು ಮೂರು ಗುಣಗಳನ್ನು ಬೇರೆ ಬೇರೆ ರಾಶಿಗಳಾಗಿ ವಿಂಗಡಿಸುವರು. ಈ ಜಡವಸ್ತುಗಳು ಹೊಂದಿರುವ ಗುಣ ವಿಶೇಷಗಳಿಂದ ಅವುಗಳಿಗೆ ಗುಣಗಳೆಂದು ಹೆಸರು. ಸತ್ವಗುಣದಿಂದ ಜ್ಞಾನ ಆನಂದಗಳು ಜೀವರ ಸ್ವಭಾವಗಳಲ್ಲಿ ಪ್ರಕಟವಾಗುವುವು. ರಜೋಗುಣವು ಚಟು ವಟಿಕೆಗಳಿಗೆ ಸಹಕಾರಿ. ತಮೋಗುಣದ ಪರಿಣಾಮ, ಅಜ್ಞಾನ ಮತ್ತು ದುಃಖ. ಭಗವಂತನ ಇಚ್ಛೆಯಿಂದ, ಅವನ ಪ್ರೇರಣಾಬಲದಿಂದ, ಶ್ರೀಭೂದುರ್ಗಿಯರು, ಮುಂದಿನ ಸೃಷ್ಟಿಗೆ ಬೇಕಾದ ವಸ್ತುಗಳನ್ನು (ತತ್ವಗಳನ್ನು) ತಯಾರಿಸಲು ಮೊದಲು ಮಾಡುವರು.

100 ಭಾಗ ಸತ್ವಗುಣದೊಡನೆ, 10 ಭಾಗ ರಜೋಗುಣವನ್ನೂ, 1 ಭಾಗ ತಮೋಗುಣವನ್ನೂ ಕೂಡಿಸಿ, ಕ್ಷೋಭೆಯಿಂದ ಒಂದಾಗಿಸಿ, ಬ್ರಹ್ಮ ವಾಯುಗಳ ಶರೀರಗಳಿಗೆ ಬೇಕಾದ ಮಹತ್ತತ್ವವನ್ನು ಮೊದಲು ಸೃಷ್ಟಿಸುವರು. ಆ ಮಹತ್ತ ತ್ವವದ ಕೆಲವಂಶಗಳಿಗೆ ಮೂಲದ ರಜೋಗುಣ ತಮೋಗುಣಗಳನ್ನು ಯಥೋಚಿತ ವಾಗಿ ಬೆರಸಿ, ಶಿವನಿಗೆ ಬೇಕಾದ ಮೂರು ಶರೀರಗಳನ್ನು ಸೃಷ್ಟಿಸುತ್ತಾರೆ. ಸತ್ವ ಪ್ರಧಾನವಾದ ವೈಕಾರಿಕ ಅಹಂಕಾರ, ರಜೋಗುಣಪ್ರಧಾನವಾದ ತೈಜಸ ಅಹಂಕಾರ ಮತ್ತು ತಮೋಗುಣ ಪ್ರಧಾನವಾದ ತಾಮಸ ಅಹಂಕಾರ ಎಂಬುವು ಆ ಮೂರು ಶರೀರಗಳು. ಬ್ರಹ್ಮ ವಾಯುಗಳಲ್ಲಿಯೂ, ಅವರ ಪತ್ನಿಯರಲ್ಲಿಯೂ ಪ್ರವಿಷ್ಟರಾದ

ರಮಾ ನಾರಾಯಣರು, ಅವರಿಂದೊಡಗೂಡಿ, ಶಿವಪಾರ್ವತಿಯರಲ್ಲಿ ಪ್ರವಿಷ್ಟರಾಗಿ ಮುಂದಿನ ಸೃಷ್ಟಿಯನ್ನು ನಡೆಸುವರು – ವೈಕಾರಿಕದಿಂದ ದೇವತಾ ಶರೀರಗಳು ಮತ್ತು ಮನಸ್ಸು; ತೈಜಸದಿಂದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ದಶ ಶಕ್ತಿಗಳು, ಮತ್ತು ತಾಮಸಾಹಂಕಾರದಿಂದ ಪಂಚತನ್ಮಾತ್ರಗಳು.

ಈ ಎಲ್ಲಾ ತತ್ವಗಳೂ ಸೂಕ್ಷ್ಮವಾದವುಗಳೇ ಸರಿ. ಕಡೆ ಕಡೆಯ ತತ್ವಗಳಿಗಿಂತ ಮೇಲೆ ಮೇಲಿನ ತತ್ವಗಳು ಹೆಚ್ಚು ಹೆಚ್ಚು ಸೂಕ್ಷ್ಮ. ಅಲ್ಲದೆ ಕೆಳಕೆಳಗಿನ ತತ್ವಗಳಲ್ಲಿ ಮೇಲಿನ ಎಲ್ಲಾ ತತ್ವಗಳೂ ಮಿಶ್ರವಾಗಿರುತ್ತವೆ. ಇವುಗಳಿಂದ ಭಗವಂತ ನವ ಆವರಣಗಳನ್ನು ಮೊದಲು ಸೃಷ್ಟಿಸುತ್ತಾನೆ. ಇವು ಸತ್ವ, ರಜ, ತಮ, ಮಹತ್, ಅಹಂಕಾರ, ಆಕಾಶತನ್ಮಾತ್ರ, ವಾಯುತನ್ಮಾತ್ರ, ತೇಜಸ್‌ತನ್ಮಾತ್ರ ಮತ್ತು ಆಪ (ಜಲ) ತನ್ಮಾತ್ರ ಆವರಣಗಳು. ಗೋಳಾಕಾರದ ಈ ಆವರಣಗಳು ಹೊರಗೆ ಸರಿದಂತೆಲ್ಲಾ ಒಂದಕ್ಕಿಂತ ಒಂದು ಹತ್ತು ಪಟ್ಟು ಹೆಚ್ಚು ವಿಸ್ತಾರವಾದುದು. ಕಟ್ಟಕಡೆಯ ಒಳಗಿನ ಜಲ ಆವರಣದ ವಿಸ್ತಾರ 1,000 ಯೋಜನದಷ್ಟು. ಇದೇ ತತ್ವಗಳಿಂದ ಅವರವರಿಗೆ ಯೋಗ್ಯವಾದ ಶರೀರಗಳನ್ನು ಕೊಟ್ಟು ದೇವತಾ ಅಭಿಮಾನಿಗಳನ್ನು ಅಲ್ಲಲ್ಲಿ ನೆಲೆಗೊಳಿಸುವನು. ಇವರೇ ಶ್ರೀ, ಭೂ, ದುರ್ಗಾ, ಬ್ರಹ್ಮ, ಶಿವ, ಗಣಪತಿ, ಭೂತವಾಯು, ಅಗ್ನಿ ಮತ್ತು ವರುಣ. ಈ ವಿಧವಾದ ಸೂಕ್ಷ್ಮ ಭೌತ ಸೃಷ್ಟಿ ಮುಗಿಯುವ ವೇಳೆಗೆ ಪ್ರಸಕ್ತ ಕಲ್ಪದ ಬ್ರಹ್ಮನ ಆಯುರ್ಮಾನದಲ್ಲಿ 50 ವರ್ಷಗಳು ಮುಗಿದಿರುವುವು. ಬ್ರಹ್ಮಾದಿ ದೇವತೆಗಳಲ್ಲಿ ರಮಾ ನಾರಾಯಣರು ಪ್ರವಿಷ್ಟರಾಗಿ ಮಹತ್ತತ್ವದಿಂದ ಮುಂದಿನ ಸೃಷ್ಟಿ ಕಾರ್ಯವನ್ನು ನಡೆಸುವರು. ಭಗವಂತನ ಸೇವಕರಾಗಿ ದುಡಿಯುವುದರಿಂದ ಅವರಿಗೆ ಮಹಾನಂದ. ಸೃಷ್ಟಿಯಲ್ಲಿ ಬರಬೇಕಾದ ಜೀವರಿಗೂ ಅವರವರಿಗೆ ಯೋಗ್ಯಗಳಾದ ಸೂಕ್ಷ್ಮ ಶರೀರಗಳು ನಿರ್ಮಾಣವಾಗುವುವು.

ಜೀವರಿಗೆ ಅನಾದಿಯಿಂದ ಆವರಕವಾಗಿರುವ ಅಜ್ಞಾನ ಕವಚಕ್ಕೆ ಲಿಂಗಶರೀರ ಅಥವ ಕಾರಣ ಶರೀರ ಎಂದು ಹೆಸರು. ಅದರ ಮೇಲೆ ಅವರಿಗೀಗ ಬರುವ ಸೂಕ್ಷ್ಮ ಶರೀರಗಳಿಗೆ ಅನಿರುದ್ಧ ಶರೀರಗಳೆಂದು ಹೆಸರು. ಅವರ ಕಾರ್ಯಗಳನ್ನು ನಡೆಸಿಕೊಡುವ ದೇವತಾ ಗಣದವರಿಗೆ ಅದು ಆವಾಸ ಸ್ಥಾನ. ಬ್ರಹ್ಮನ ಐವತ್ತನೇ ವರ್ಷದ ಕಡೆಯ ದಿವಸ, ಜಲ ಆವರಣದಲ್ಲಿ ಅಡಗಿದ್ದ ಭೂರೇಣುಗಳನ್ನು ತೆಗೆದು,

ಭಗವಂತನು ಜಲಾವರಣದೊಳಗೆ ಹತ್ತನೆಯದಾದ ಭೂ ಆವರಣವನ್ನು ರಚಿಸುವನು. ಇದು ಅತಿ ಶುದ್ಧವಾದ ಬಂಗಾರದ ವಸ್ತು ವಿಶಿಷ್ಟವಾದುದು. ಅಭಿಮಾನಿ, ಭೂದೇವಿ. ಭೂ ಆವರಣವಾದುದರಿಂದಲೂ, ಗುಂಡಾದ ಆಕೃತಿಯದಾಗಿರುವುದರಿಂದಲೂ ಇದಕ್ಕೆ ಭೂಗೋಳ ಎಂದು ಹೆಸರು. ಇದರೊಳಗೆ ಬ್ರಹ್ಮನಿಗೆ ಶರೀರ ಪ್ರಾಯಗಳಾದ ಹದಿನಾಲ್ಕು ಲೋಕಗಳ ಸೃಷ್ಟಿಯಾಗುವುದರಿಂದ ಇದಕ್ಕೆ ಬ್ರಹ್ಮಾಂಡ ವೆಂತಲೂ ಹೆಸರು. ಶ್ರೀ ವಾದಿರಾಜರ 'ಭೂಗೋಳ ವರ್ಣನೆ' ಎಂದಾಗ, ನಾವು ತಿಳಿಯಬೇಕಾದುದು ಈ ಭೂಗೋಳದ ವಿಚಾರ; ನಾವೀಗ ವಾಸಮಾಡುತ್ತಿರುವ ಭರತ ಖಂಡವೆನ್ನುವ ಭೂಗೋಳದ ವಿಚಾರ ಮಾತ್ರವಲ್ಲ. ಈ ಬ್ರಹ್ಮಾಂಡವು 100 ಕೋಟಿ ಯೋಜನ ಅಗಲವುಳ್ಳದಾಗಿದ್ದು, ಒಳಗಿನ ವಿವರವು (ಟೊಳ್ಳು ಭಾಗವು) 50 ಕೋಟಿ ಯೋಜನ ವಿಸ್ತಾರವುಳ್ಳದ್ದಾಗಿದೆ. ಆರಂಭದಲ್ಲಿ ಇದು ನೀರಿನಿಂದ ತುಂಬಿಕೊಂಡಿರುತ್ತದೆ. ಶ್ರೀ ಮನ್ನಾರಾಯಣನು ಶ್ರೀ ದೇವಿಯಿಂದ ಕೂಡಿಕೊಂಡು, ಪ್ರಾಕೃತ ಅಥವ ಸ್ಥೂಲ ಸೃಷ್ಟಿಗೆ ಬರಬೇಕಾದ ಎಲ್ಲವನ್ನೂ, ಎಲ್ಲರನ್ನೂ ತನ್ನ ಉದರದಲ್ಲಿ ಅಡಗಿಸಿಕೊಂಡು ಬ್ರಹ್ಮಾಂಡದೊಳಗಿನ ಗರ್ಭೋದಕ ದಲ್ಲಿ ವಿಶ್ರಮಿಸುತ್ತಾನೆ. ಆಗ ಶ್ರೀದೇವಿಯೇ ಆದಿಶೇಷನಲ್ಲಿ ಶೇಷನಂತೆ ರೂಪ ವನ್ನು ತಾಳಿ, ತನ್ನ ಪತಿಯು ಮಲಗಲು ಹಾಸುಗೆಯಾಗುವಳು.

## ವೈಕೃತ ಅಥವ ಸ್ಥೂಲ ಸೃಷ್ಟಿ

ಕೆಲವು ಕಾಲದ ನಂತರ ಶ್ರೀಮನ್ನಾರಾಯಣನ ನಾಭಿಯಿಂದ ಹದಿನಾಲ್ಕು ದಳಗಳುಳ್ಳ ಬೃಹತ್ಕಮಲವು ಎದ್ದು ನಿಲ್ಲುವುದು. ಅದರಲ್ಲಿ ಚತುರ್ಮುಖ ಬ್ರಹ್ಮನ ಜನನ. ಕಮಲದ ದಳಗಳು ಹದಿನಾಲ್ಕು ಲೋಕಗಳ ಸಂಕೇತ. ಇದು ನಡೆದುದು ಬ್ರಹ್ಮನ 51 ನೇ ವರ್ಷದ ಮೊದಲ ದಿನದ ಉದಯ ಕಾಲದಲ್ಲಿ.

ಕಮಲದಲ್ಲಿ ತನ್ನನ್ನು ಕಂಡು ಮೊದಲು ತಬ್ಬಿಬ್ಬಾದ ಬ್ರಹ್ಮನು ಧ್ಯಾನಂಗತ ನಾಗಿ, ಪರಮಾತ್ಮನಿಂದ ಉಪದೇಶ ಹೊಂದಿ, ಸೃಷ್ಟಿ ಕಾರ್ಯದಲ್ಲಿ ತೊಡಗಲು ಸಿದ್ಧನಾಗಿ ಬ್ರಹ್ಮಾಂಡದೊಳಗೆಲ್ಲಾ ತುಂಬಿದ ವಿರಾಟ್ ರೂಪವನ್ನು ಪಡೆಯುತ್ತಾನೆ. ಪರಬ್ರಹ್ಮನೂ ವಿರಾಟ್ ರೂಪದಿಂದ ಚತುರ್ಮುಖನಲ್ಲಿ ಪ್ರವಿಷ್ಟನಾಗಿ, ಸೃಷ್ಟಿಯನ್ನು ನಡೆಸಿ, ಅವನಿಗೆ ಕೀರ್ತಿಯನ್ನು ತಂದುಕೊಡುತ್ತಾನೆ. ಬ್ರಹ್ಮಾದಿ ದೇವತೆಗಳೇ

ಆಗಲಿ, ಶ್ರೀ ದೇವಿಯೇ ಆಗಲಿ, ಯಾರೂ ಸ್ವತಂತ್ರವಾಗಿ ವ್ಯಾಪಾರ ನಡೆಸ ಬಲ್ಲವರಲ್ಲ. ಆದುದರಿಂದ, ಪರಮಾತ್ಮನು ಅವರಲ್ಲಿ ನಿಂತು ವ್ಯಾಪಾರಗಳನ್ನು ಮಾಡಿ, ಅವರವರ ಸ್ವರೂಪ ಸಾಮರ್ಥ್ಯಗಳು ವ್ಯಕ್ತವಾಗುವಂತೆ ಮಾಡುತ್ತಾನೆ. ಇಹದಲ್ಲಿಯೂ, ಮುಕ್ತಿಯಲ್ಲಿಯೂ ಅದು ಅವರಿಗೆ ಆನಂದಪ್ರದವಾಗುತ್ತದೆ.

ಬ್ರಹ್ಮನ ಮೊದಲನೆಯ ಈ ಹಗಲಿನಲ್ಲಿ ಭೂತ ಆಕಾಶ, ಪ್ರವಾಹ ವಾಯು, ಅಗ್ನಿ, ನೀರು ಮತ್ತು ಭೂಮಂಡಲಗಳ ಸೃಷ್ಟಿಯಾಗುತ್ತದೆ.

" ಆಕಾಶಾದಸೃಜದ್ವಾಯುಂ ವಾಯೋಸ್ತೇಜೋ ವ್ಯಜೀಜನತ್ । ತೇಜಸಃ ಸಲಿಲಂ ತಸ್ಮಾತ್ ಪೃಥಿವೀಮಸೃಜದ್ವಿಭುಃ ॥ " ಇದು ಮಣಿಮಂಜರಿ ಎಂಬ ಬಾಲಭೋಧೆಯ ತಾತ್ವಿಕ ಗ್ರಂಥದಿಂದ ಆಯ್ದ ಶ್ಲೋಕ. 120 ಭಾಗ ಶಬ್ದ ತನ್ಮಾತ್ರದೊಡನೆ ವಾಯು, ಅಗ್ನಿ, ಜಲ, ಭೂ ತನ್ಮಾತ್ರಗಳ ಇಪ್ಪತ್ತು ಇಪ್ಪತ್ತು ಭಾಗಗಳ ಪಂಚೀಕರಣ ಅಥವ ' ಆಲೋಡನೆಯಿಂದ ' ರಾಸಾಯನಿಕ ಸಂಯೋಗವಾಗಿ ಆಕಾಶದ ಸೃಷ್ಟಿಯಾಗಿರುವುದರಿಂದ ಅದು ಶೂನ್ಯದಂತೆ ಕಂಡರೂ ಶೂನ್ಯವಲ್ಲ. ತಾಮಸ ಅಹಂಕಾರ ತತ್ತ್ವದಲ್ಲಡಗಿದ ವಸ್ತುಗಳಿಂದಲೇ ಕ್ರಮವಾಗಿ ಪಂಚತನ್ಮಾತ್ರಗಳ ಸೃಷ್ಟಿಯಾದಂತೆ, ಆಕಾಶದಲ್ಲಡಗಿದ ತತ್ವಗಳಿಂದಲೇ ವಾಯು, ಅಗ್ನಿ, ನೀರು, ಭೂಮಿಗಳ ಸೃಷ್ಟಿಯಾಗುವುದು. ವಾಯುತತ್ವವು 49 ಅಂಶಗಳಿಂದ ಕೂಡಿರುವುದು. ಅವುಗಳಲ್ಲಿ ಮುಂದಿನ ಸೃಷ್ಟಿಗೆ ಬೇಕಾದ ಅಂಶಗಳೂ ಅಡಗಿರುವುವು. ಹೈಡ್ರೋಜನ್ ಎಂಬ ವಾಯುತತ್ವದಿಂದ, ಆಮ್ಲಜನಕವೊ, ಅವೆರಡರ ಸಂಯೋಗದಿಂದ ನೀರೂ, ನೀರೊಳಗೆ ಬೆರೆತಿರುವ ಅಂಶಗಳಿಂದ ಖನಿಜ ವಸ್ತುಗಳೂ ಸೃಷ್ಟಿಯಾಗುವುದೆಂದು ಕಂಡುಹಿಡಿದಿರುವ ಈಗಿನ ವಿಜ್ಞಾನಿಗಳ ಸಾಹಸವು ಮೆಚ್ಚತಕ್ಕದ್ದೇ ಸರಿ. ನಮ್ಮ ಶಾಸ್ತ್ರಗಳು ವೈಜ್ಞಾನಿಕವಾಗಿರುವುದನ್ನು ಎತ್ತಿ ತೋರಿಸಲು ಈ ಪ್ರಶಂಸೆಯ ಮಾತು.

ವಿಜ್ಞಾನಿಗಳು, ಈಗೊಂದು ಮಾತು, ಆಗೊಂದು ಮಾತು ಹೇಳುತ್ತಾ, ತಾವು ಹೇಳುವುದೇ ಸರಿ ಎನ್ನುವುದೂ, ಶಾಸ್ತ್ರಗಳನ್ನು ಸರಿಯಾಗಿ ಅರ್ಥಮಾಡಿ ಕೊಳ್ಳಲು ಪ್ರಯತ್ನಿಸದಿರುವುದೂ ಅವರು ಎಸಗುತ್ತಿರುವ ಅಕ್ಷಮ್ಯ ಅಪರಾಧ.

ಹಿಂದೆಯೇ ಹೇಳಿದಂತೆ, ಹಂತ ಹಂತವಾಗಿ ಜೀವಿಗಳ ಭೌತಶರೀರಗಳ ಸೃಷ್ಟಿಯೂ ಆಗುತ್ತದೆ. ಬ್ರಹ್ಮನ ಒಂದು ಹಗಲು 432 ಕೋಟಿ ವರ್ಷಗಳಿಗೆ

ಸಮವಾದುದರಿಂದ, ರಾಸಾಯನಿಕ ವಿಧಾನದಿಂದ ಭೌತ ಸೃಷ್ಟಿಯಾದುದು ಸುಮಾರು ಇನ್ನೂರು ಕೋಟಿ ವರ್ಷಗಳ ಕಾಲ ; ಜೀವ ದೇಹಗಳ ಸೃಷ್ಟಿಯಾದುದು ಅಲ್ಲಿಂದ ಮುಂದೆ ಸುಮಾರು ಇನ್ನೂರು ಕೋಟಿ ವರ್ಷಗಳ ಕಾಲ. ಆ ದಿವಸದ ರಾತ್ರಿ ಪ್ರಾರಂಭವಾಗುವ ಮೊದಲು ಅದುವರೆಗೆ ಸೃಷ್ಟಿಯಾದ ಎಲ್ಲಾ ಪ್ರಾಣಿಗಳನ್ನೂ ಲಯಗೊಳಿಸಿ, ಬ್ರಹ್ಮನು ಸರಸ್ವತೀ ದೇವಿಯೊಡನೆ ತನ್ನ ಸತ್ಯ ಲೋಕದಲ್ಲಿ ವಿಶ್ರಮಿಸುತ್ತಾನೆ. ಘನೀಭೂತವಾಗಿ ಆಕಾಶಕ್ಕೆ ಬಿಡುವು ಕೊಟ್ಟಿದ್ದ ಗರ್ಭೋದಕವು ಈಗ ಉಕ್ಕಿ, ಸತ್ಯಲೋಕದ ಕೆಳಗಿನ ಎಲ್ಲಾ ಲೋಕಗಳೂ ಆ ನೀರಿನಲ್ಲಿ ಮುಳುಗಿ ಹೋಗುತ್ತವೆ. ಇದು ಪದ್ಮಕಲ್ಪದ ಕಥೆ.

ಈಗ ನಡೆಯುತ್ತಿರುವ ಶ್ವೇತವರಾಹ ಕಲ್ಪವು ಪ್ರಾರಂಭವಾದಾಗ, ಉಕ್ಕಿದ್ದ ನೀರು ಇಳಿದು ಮತ್ತೆ ಘನೀಭೂತವಾಗಿ ನಿಲ್ಲುವುದು. ಲೋಕಗಳು ಯಥಾಸ್ಥಿತಿಯಲ್ಲಿ ಕಾಣಿಸಿಕೊಳ್ಳುವುವು. ಆದರೆ, ಪಾತಾಳದವರೆಗೆ ಕುಸಿದಿದ್ದ ಭೂಮಿಯನ್ನು ಭಗವಂತನು ವರಾಹರೂಪದಿಂದ ಮೇಲೆತ್ತಿ ನಿಲ್ಲಿಸುವನು. ಆದುದರಿಂದ ಇದಕ್ಕೆ ಶ್ವೇತ ವರಾಹ ಕಲ್ಪ ಎಂದು ಹೆಸರು. ಬ್ರಹ್ಮನ ದಿವಸಾಂತ್ಯದಲ್ಲಿ ನಡೆಯುವ ಈ ಜಲಪ್ರಳಯವೇ ಬೇರೆ; ಮನುಕಲ್ಪಗಳಲ್ಲಿ ನಡೆಯುವ ಜಲ ಪ್ರಳಯಗಳೇ ಬೇರೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೇನೆಂದರೆ, ಉಕ್ಕಿತುಂಬಿದ್ದ ನೀರು ಏರುವಾಗಲೂ ಇಳಿಯುವಾಗಲೂ ಹೊರಡುವ ಪ್ರವಾಹಗಳ ದೆಸೆಯಿಂದ ಶಿಲಾಸ್ತರಗಳ ಸವೆತಗಳೂ, ಭೂಪದರದಲ್ಲಿದ್ದ ಪ್ರಾಣಿ–ಸಸ್ಯಗಳ ಅವಶೇಷಗಳ ಸ್ಥಾನ ಪಲ್ಲಟವೂ ಆಗಿಹೋಗಿದೆ ಇದನ್ನರಿಯದ ವಿಜ್ಞಾನಿಗಳ ಊಹೆಗಳಿಗೆ ಅಡೆ ತಡೆ ಇಲ್ಲವಾಗಿದೆ.

ಇದುವರೆಗೆ ಹೇಳಿದ ವಿವರಗಳಿಂದ ಬುದ್ಧಿವಂತರಾದ ಯಾರಾದರೂ ಪುರಾಣೋಕ್ತ ಸೃಷ್ಟಿಯ ವರ್ಣನೆಯು ಅತ್ಯಂತ ಕ್ರಮಬದ್ಧವಾಗಿಯೂ, ಆದುದರಿಂದಲೇ ಪರಮ ವೈಜ್ಞಾನಿಕವಾಗಿಯೂ ಇರುವುದೆಂದು ಅರಿತುಕೊಳ್ಳಬಹುದು.

ಶಬ್ದತನ್ಮಾತ್ರ ಅಥವಾ ಆಕಾಶತನ್ಮಾತ್ರದಿಂದ ನಮ್ಮ ಅನುಭವದಲ್ಲಿರುವ ಆಕಾಶತತ್ತ್ವವು ಪಂಚೀಕರಣವೆಂಬ ವಿಧಾನದಿಂದ (ರಾಸಾಯನಿಕ ಸಂಯೋಗದಿಂದ) ಉಂಟಾಯಿತೆಂದೂ, ಅದರಿಂದ ಮುಂದೆ ವಾಯು, ಅಗ್ನಿ, ಜಲ, ಪೃಥ್ವಿ ಎಂಬ ತತ್ತ್ವಗಳುಂಟಾಗಿ ವಿಶ್ವದ ಸೃಷ್ಟಿಯಾಯಿತೆಂದೂ ಪುರಾಣಗಳು ತಿಳಿಸುತ್ತವೆ. ಮಧ್ಯ

ಏಷ್ಯಾದಿಂದ ಬಂದು ಪಂಜಾಬಿನಲ್ಲಿ ನೆಲೆಸಿದ ದನಗಾಹಿ ಆರ್ಯರು ಇಂತಹ ಅಸ್ಪಟ ವೈಜ್ಞಾನಿಕ ವಿಷಯಗಳನ್ನೊಳಗೊಂಡ, ಸೂತ್ರಪ್ರಾಯಗಳಾದ ವೇದಗಳನ್ನು ಈಗ್ಗೆ ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ರಚಿಸಿದರು ಎಂದು ಭೋಧಿಸುವ ಈಗಿನ ಚರಿತ್ರೆಯ ಮಾತುಗಳನ್ನೇ ನಂಬಿ, ಪುರಾಣ ಪುಣ್ಯಕಥೆಗಳನ್ನು ಗಾಳಿಯ ಪಾಲು ಮಾಡುತ್ತಿರುವ ನಮ್ಮ ಬುದ್ಧಿವಂತಿಕೆಗೆ ಏನು ಹೇಳೋಣ ! ಭಾರತೀಯ ಸಂಸ್ಕೃತಿಯೆಂದು ಹೆಮ್ಮೆಪಡುವ ನಾವು ಇನ್ನಾದರೂ ಎಚ್ಚರಗೊಳ್ಳಬೇಕಲ್ಲವೆ ?

ಮುಂದೆ, ವಿವರಣೆಗಳ ಸಹಿತವಾಗಿ ಅನುವಾದ ಮಾಡಲಿರುವ ಶ್ರೀ ಗುರುರಾಜರ ಭೂಗೋಳ ವರ್ಣನೆಯನ್ನು ನೋಡಿದರೆ, ಬುದ್ಧಿವಂತರಾದ ಓದುಗರು ಇನ್ನೂ ಹೆಚ್ಚು ಆಶ್ಚರ್ಯಪಡುವುದರಲ್ಲಿ ಸಂಶಯವಿಲ್ಲ. ಗಣಿತಶಾಸ್ತ್ರವನ್ನು ಅದರಲ್ಲಿ ಆ ಮಹನೀಯರು ಧಾರಾಳವಾಗಿ ಬಳಸಿದ್ದಾರೆ. ಗಣಿತ ಶಾಸ್ತ್ರದ ಚೌಕಟ್ಟಿನಲ್ಲಿ ರಚಿತವಾಗಿರುವ ಆ ಚಿಕ್ಕ, ಚೊಕ್ಕ ಗ್ರಂಥವು ಧಾರಾಳ ಬುದ್ಧಿಯ ವಿಜ್ಞಾನಿಗಳಿಗೆ ಒಪ್ಪಿಗೆಯಾಗದೆ ಇರದು.

॥ ಶ್ರೀ ॥ ಶ್ರೀಃ ॥ ಶ್ರೀ ॥

# ಭೂಗೋಳ ವರ್ಣನೆ

## ಶ್ರೀ ವಾದಿರಾಜ ಗುರುರಾಜರಿಂದ ವಿರಚಿತವಾದುದು.

## ಹರಿಗುರು ವಂದನೆ

ನಾರಾಯಣಂ ನಮಾಮ್ಯಗ್ರ್ಯಹಾರಾಯಣ ಶಿರೋಧರಮ್ ।
ದೂರಾಯನಮದೂರಂಚ ಪಾರಾಯಣ ಪರಾಯಣಮ್ ॥ ೧ ॥

ಅಜ್ಞಾತಾಮ್ನಾಯ ಶಿರಸೇ ಸ್ವಾಜ್ಞಾತ ಕಮಲೋರಸೇ ।
ಸ್ಮರದ್ವ್ರಜ್ಮೀನ ಸರಸೇ ತುರಂಗ ಶಿರಸೇ ನಮಃ ॥ ೨ ॥

ನಮಸ್ತಮಸ್ತರಣಯೇ ಮುನಯೇ ಶಾಸ್ತ್ರಯೋನಯೇ ।
ವ್ಯಾಸಾಯಾಶೇಷ ಜನಯೇಽಶನಯೇಽಕುನಯೈಷಿಣಾಮ್ ॥ ೩ ॥

ಶ್ರಿಯೇನಂಯೋನ್ನತ ಧಿಯೇಗತಭಿಯೇ ನಮಃ ।
ಪ್ರಿಯೇಕ್ಷಣರಯೇ ಕಾಪಿಲಯೇ ಸತ್ಯಸ್ಯಹೇಜ್ಞತಂ ॥ ೪ ॥

ನಮೋಽಸ್ತು ಭೂಮಯೇ ಲಕ್ಷ್ಮೀಜಾಮಯೇ ಯಾಽಸ್ತಿ ಧೀಮಯೇ ।
ವರಾಹವದನೇ ಶಾಸ್ತ್ರ ಸದನೇ ಸ್ವಪ್ರಮೋದನೇ ॥ ೫ ॥

ಶುದ್ಧಾಯಾನಾದಿಸಿದ್ಧಾಯ ಸ್ವಾಧ್ಯಾಯೋನ್ನದ್ಧ ಬುದ್ಧಯೇ ।
ಹೃದ್ಯಾಯ ನಿರವದ್ಯಾಯ ಮಧ್ವಾಯಚ ನಮೋ ನಮಃ ॥ ೬ ॥

ಮನೋಜ್ಞಮೂರ್ತ್ಯೈ ಭಾರತ್ಯೈ ಮತಿಮತ್ಯೈ ಹರೇಃ ಪದೇ ।
ಕೃತರತ್ಯೈ ಸದೋನ್ನತ್ಯೈ ಮಹಾಭೂತ್ಯೈ ನಮೋ ನಮಃ ॥ ೭ ॥

ಅರಿಭ್ಯಃ ಕುತ್ಸಿತಧಿಯಾಂ ತರಿಭ್ಯೋ ಭವಸಾಗರೇ ।
ಗುರುಭ್ಯೋ ಸೇವಿನಾಂ ಕಲ್ಪತರುಭ್ಯಶ್ಚ ನಮೋ ನಮಃ ॥ ೮ ॥

ದೂರದಲ್ಲಿಯೂ ಸಮೀಪದಲ್ಲಿಯೂ ಇರುವವನೂ, ತನ್ನನ್ನು ಸ್ತುತಿಸುವವರಿಗೆ ಅನುಕೂಲಕರನೂ ಆದ ಶ್ರೀ ಭೂವರಾಹನಿಂದ ಅಭಿನ್ನನಾದ ಶ್ರೀಮನ್ನಾರಾಯಣನಿಗೆ

ನಮಸ್ಕಾರ. ಉಪನಿಷತ್ತುಗಳಿಂದಲೂ ಪೂರ್ಣವಾಗಿ ತಿಳಿಯಲಾಗದವನೂ, ತನ್ನನ್ನು ಕಾಣಲು ತವಕಿಸುವ ಭಕ್ತರ ಕಣ್ಣುಗಳೆಂಬ ಮೀನುಗಳಿಗೆ ವಿಹಾರಯೋಗ್ಯ ಸರೋವರದಂತಿರುವವನೂ ಆದ ಹಯಗ್ರೀವ ಮೂರ್ತಿಗೆ ನಮಸ್ಕಾರ. ಅಜ್ಞಾನವೆಂಬ ಕತ್ತಲೆಯನ್ನೋಡಿಸುವ ಸೂರ್ಯನೂ, ಸಕಲ ವಿಧ ಸೃಷ್ಟಿಗೂ ಮೂಲ ಕಾರಣನೂ, ದುರ್ಮಾರ್ಗಾವಲಂಬಿಗಳಿಗೆ ಸಿಡಿಲಿನಂತಿರುವವನೂ ಆದ ವೇದವ್ಯಾಸ ದೇವನಿಗೆ ನಮಸ್ಕಾರ. ಮಹೋನ್ನತ ಬುದ್ಧಿಶಾಲಿನಿಯಾದರೂ ಗಾಂಭೀರ್ಯದಿಂದಿರುವವಳೂ, ನಿರ್ಭೀತಳೂ, ಭಕ್ತರಿಗೆ ಕಟಾಕ್ಷವೀಕ್ಷಣೆಯಿಂದ ಸಂಪತ್ಪ್ರದಾಯಕಳೂ, ಸಕಲ ವಿಧ ತಾಪಗಳನ್ನು ಪರಿಹರಿಸುವಳೂ, ಭಗವಂತನ ಇಂಗಿತವನ್ನು ಅರಿತವಳೂ ಆದ ಶ್ರೀದೇವಿಗೆ ನಮಸ್ಕಾರ. ಲಕ್ಷ್ಮೀದೇವಿಯ ಸಹೋದರಿ ಎನಿಸುವವಳೂ, ವರಾಹ ಮೂರ್ತಿಗೆ ಸರಿಸಾಟಿಯಾಗಿ ವರಾಹವದನೆಯಾದವಳೂ, ಬುದ್ಧಿಪ್ರದಳೂ, ಶಾಸ್ತ್ರ ನಿಧಿಯೂ, ತನ್ನವರಿಗೆ ಸಂತೋಷ ಕೊಡುವವಳೂ ಆದ ಭೂದೇವಿಗೆ ನಮಸ್ಕಾರ.

ಪರಿಶುದ್ಧಾಂತಃಕರಣನೂ, ಋಜುಗಣದವನಾದ ಕಾರಣ ಅನಾದಿ ಜ್ಞಾನ ಸಂಪನ್ನನೂ, ವೇದಪ್ರತಿಪಾದ್ಯ ಬುದ್ಧಿಶಾಲಿಯೂ, ಪ್ರಿಯಕರನೂ, ದೋಷದೂರನೂ ಆದ ಮಧ್ವಮುನಿಗೆ ನಮಸ್ಕಾರ, ನಮಸ್ಕಾರ. ಸೌಂದರ್ಯಶಾಲಿನಿಯೂ, ಶುದ್ಧ ಬುದ್ಧಿಯುವಳೂ, ಶ್ರೀಹರಿಯ ಪಾದಕಮಲಗಳ ಸೇವೆಯಲ್ಲಿ ಆಸಕ್ತಳೂ, ಸ್ತ್ರೀ ಜೀವಶ್ರೇಣಿಯಲ್ಲಿ ಹಿರಿಯಳೂ, ಸಕಲ ಸಿದ್ಧಿಪ್ರದಳೂ ಆದ ಭಾರತೀದೇವಿಗೆ ನಮಸ್ಕಾರ, ನಮಸ್ಕಾರ. ಕುಹಕ ಬುದ್ಧಿಯುವರಿಗೆ ಶತ್ರುಪ್ರಾಯರೂ, ಸಂಸಾರ ಸಾಗರವನ್ನು ದಾಟಿಸುವವರೂ, ಶುಶ್ರೂಷುಗಳಿಗೆ ಕಲ್ಪತರುವಿನಂತೆ ಇಷ್ಟದಾಯಕರೂ ಆದ ಸಕಲ ಗುರುಗಳಿಗೂ ನಮಸ್ಕಾರ.

## ಬ್ರಹ್ಮಾಂಡ

ಪೂರ್ವಖರ್ಪರತಃ ಪ್ರತ್ಯಕ್ ಖರ್ಪರಾಂತಂ ತಥೋತ್ತರಾತ್ ।
ಖರ್ಪರಾದ್ದಕ್ಷಿಣಾಂತಂಚ ಮಂಡಲಾಕಾರತಃಸ್ಥಿತಮ್ ॥೯॥

ಘನೋದಕಂಸ್ಯಾದ್ದ್ವಿಸ್ತ್ರಾವ ತ್ಸಮುದ್ರ ಇವ ಸಂಶ್ರುತಂ ।
ತದಂತರ್ಮಂಡಲಾಕಾರಂ ತಮಶ್ಚ ಸಮುದೀರಿತಮ್ ॥೧೦॥

ದ್ವಿಸ್ತ್ರಾವತ್ಪೃಥಿವೀತ್ಯುಕ್ತಂ ಪೃಥುತ್ವಾಚ್ಛ್ರುತಿ ಮಸ್ತಕೇ ।
ತದಂತರ್ಮಂಡಲಾಕಾರಾ ಭೂಶ್ಚೇಯಂ ಸಮುದೀರಿತಾ ॥೧೧॥

ಪೃಥಿವೀ ಸಮುದ್ರ ಪರ್ಯನ್ತೇತ್ಯುಕ್ತಾಯಾ ವಿಪ್ರಮಂಡಲೇ ।
ಮಧ್ಯೇಸೌವರ್ಣಗಿರಿಣಾ ಮೇರುಣಾ ಸಪ್ತಭಿಃಕ್ರಮಾತ್ ॥೧೨॥

ದ್ವೀಪೈಸ್ಸಮುದ್ರೈಶ್ಚಯುತಾ ಮಂಡಲಾಕಾರತಃ ಸ್ಥಿತೈಃ ।
ಪಂಚಾಶತ್ಕೋಟಿ ವಿಸ್ತೀರ್ಣಂ ಮಿಳಿತ್ವೈತತ್ತ್ರಯಂ ಕಿಲ ॥೧೩॥

[ಬ್ರಹ್ಮಾಂಡವೆಂಬುದು ಚಿಪ್ಪಿನಂತೆ ಗಟ್ಟಿಯಾದ ಭೂ ಆವರಣವಾಗಿರುವುದರಿಂದ ಅದಕ್ಕೆ ಖರ್ಪರ ಎಂದು ಹೆಸರು. ಅದು ಪೂರ್ವದಿಂದ ಪಶ್ಚಿಮಾಂತದವರೆಗೂ, ಅದರಂತೆ ಉತ್ತರದಿಂದ ದಕ್ಷಿಣದ ಕೊನೆಯವರೆಗೂ ಚೆಂಡಿನಂತೆ ದುಂಡಾಗಿರುವುದು. ಇದರ ಬುಡದ ಅರ್ಧಭಾಗವು ಘನೀಭೂತವಾದ ನೀರಿನಿಂದ ಕೂಡಿರುವುದು. ಇವಕ್ಕೆ ಘನೋದಕವೆಂದು ಹೆಸರು; ಸಮುದ್ರ ಅಥವಾ ಗರ್ಭೋದಕವೆಂತಲೂ ಸಂಕೇತವುಂಟು. ಇದರೊಳಗೆ, ವೃತ್ತಾಕಾರವಾಗಿ, ಅರ್ಧದಷ್ಟು ಪರಿಮಾಣವುಳ್ಳ ತಮಸ್ಸು ಅಥವ ಕತ್ತಲೆಯು ಭಾಗವಿರುವುದು. ಅದರ ನಡುವೆ, ಅದರ ಅರ್ಧದಷ್ಟು ಅಳತೆ ಇರುವ ಭೂಮಂಡಲವಿದೆ. ಇದು ವಿಸ್ತಾರವೂ, ಜನಜೀವನ ಯೋಗ್ಯವೂ ಆದುದೆಂದು ಉಪನಿಷತ್ತುಗಳಲ್ಲಿ ವರ್ಣಿಸಲ್ಪಟ್ಟಿದೆ. ಈ ಪೃಥ್ವೀ ಮಂಡಲವು ಸುವರ್ಣಗಿರಿಯಾದ ಮೇರುವಿನ ಸುತ್ತಲೂ, ವೃತ್ತಾಕಾರಗಳಿಂದಿರುವ ಸಪ್ತದ್ವೀಪ ಸಪ್ತಸಾಗರಗಳಿಂದ ಕೂಡಿರುವುದರಿಂದ ಸಮುದ್ರಪರ್ಯಂತ ಹಬ್ಬಿರುವುದೆಂದು ತಿಳಿದವರು ಹೇಳುವರು. ಭೂಭಾಗ, ತಮೋಭಾಗ ಮತ್ತು ಘನೋದಕ ಭಾಗಗಳ ಒಟ್ಟು ವಿಸ್ತೀರ್ಣವು 50 ಕೋಟಿ ಯೋಜನ. ಇದು ಊಹೆಯು ಮಾತ್ರಲ್ಲ; ಪ್ರಾಮಾಣಿಕವಾದುದು.

ಸೂಚನೆ: [ರಕ್ಷಾಕವಚದ 4ನೇ ಪುಟದ ಚಿತ್ರನೋಡಿ].

### ಮೂರು ವಿಭಾಗಗಳ ಅಳತೆಗಳು

ತತ್ರಭೂಃ ಕೋಟಿ ಸಂಖ್ಯಾಯಾಂ ಸಪ್ತಭಿಃಕೋಟಿಭಿರ್ಯುತಾ ।
ತತೋದ್ವಿಗುಣಿತಸ್ಯಾಂಧತಮಸಸ್ಯುಶ್ಚತುರ್ದಶ ॥೧೪॥

ಘನೋದಕಸ್ಯತಸ್ಮಾಚ್ಚ ದ್ವಿಗುಣಸ್ಯವಿಚಾರಣೇ ।
ಅಷ್ಟಾವಿಂಶತ್ಕೋಟಯಃ ಸ್ಯುಃಕೋಟಿಸಂಖ್ಯೈವಮೇವಹಿ ॥೧೫॥

ಮೇರೋರ್ಮಧ್ಯ ಪ್ರದೇಶಾತ್ತು ಸಾರ್ಧಕೋಟಿತ್ರಯಾಮಹೀ ।
ಪೂರ್ವತೋಽಪಶ್ಚಿಮಾಚ್ಚಾಪಿ ಮಿಳಿತ್ವಾ ಸಪ್ತಕೋಟಿಯುಕ್ ॥೧೬॥

ಏವಂಘನೋದ ತಮಸೋಽಪಿಭಾಗದ್ವಯಸ್ಥಯೋಃ ।
ಷೋಳಸೇತೂಕ್ತಮಾಸಂಸ್ಯಾದ್ವಿಭಾಗೇತು ತದರ್ಧಕಂ ॥೧೭॥

[ಐವತ್ತು ಕೋಟಿ ಸಂಖ್ಯಾಗಣನೆಯಲ್ಲಿ ಭೂಮಿಯ ವಿಸ್ತಾರ ಏಳು ಕೋಟಿ ಯೋಜನ. ಅದರ ಎರಡರಷ್ಟು ವಿಸ್ತಾರವಾದ ತಮೋಭಾಗದ ವಿಸ್ತಾರ ಹದಿನಾಲ್ಕು ಕೋಟಿ ಯೋಜನ. ಇದೇ ರೀತಿಯಲ್ಲಿ ವಿಚಾರ ಮಾಡಿದಾಗ, ಘನೋದಕದ ಅಳತೆ, ಕೋಟಿಗಳ ಲೆಕ್ಕಾಚಾರದಿಂದ ಇಪ್ಪತ್ತೆಂಟು ಕೋಟಿಯಾಗುವುದು. ಮೇರು ಪರ್ವತದ ಕೇಂದ್ರದಿಂದ ಅಂಚಿನವರೆಗೆ ಭೂಮಿಯು 3½ ಕೋಟಿ ಯೋಜನ ವಿಸ್ತಾರವಾಗಿರುವುದು; ಪೂರ್ವದ ಅರ್ಧ ಮತ್ತು ಪಶ್ಚಿಮದ ಅರ್ಧಭಾಗಗಳನ್ನು ಕೂಡಿಸಿದರೆ ಏಳುಕೋಟಿ ಯೋಜನವಾಗುವುದು. ಇದೇ ರೀತಿಯಾಗಿ ಘನೋದಕ ಭಾಗ, ತಮೋಭಾಗಗಳ ಅಳತೆಗಳನ್ನೂ ಪರಿಗಣಿಸಬೇಕು. ಪೂರ್ವ ಪಶ್ಚಿಮ ಭಾಗಗಳನ್ನು ಕೂಡಿಸಿದಾಗ ಇಲ್ಲಿ ಹೇಳಿದ ಅಳತೆ ಸರಿಹೊಂದುವುದು; ಭಾಗಶಃ ನೋಡಿದಾಗ ಅರ್ಧದಷ್ಟು ಅಳತೆಯನ್ನು ಗಣನೆಗೆ ತೆಗೆದುಕೊಳ್ಳಬೇಕು.]

### ಉಳಿದ ಒಂದು ಕೋಟಿ ಯೋಜನದ ಹಂಚಿಕೆ

ಏವಂಚ್ಚೈಕೋನ ಪಂಚಾಶತ್ ಕೋಟಯಸ್ತ್ರಿಷು ಖಂಡಿತಾಃ ।
ಅವಶಿಷ್ಟೈಕ ಕೋಟಿಸ್ತು ವಿಭಜ್ಯಾಲಕ್ಷಸಂಖ್ಯಯಾ ॥೧೮॥
ತಚ್ಚತುರ್ದಶಲಕ್ಷಾಣಿ ಭೂಮೇಸ್ಯುಸ್ತಮಸಸ್ತಥಾ ।
ಅಷ್ಟಾವಿಂಶಲ್ಲಕ್ಷತಾ ಸ್ಯಾಧ್ಘನೋದಕಮಪಿಕ್ರಮಾತ್ ॥೧೯॥
ಷಟ್ಪಂಚಾಶಲ್ಲಕ್ಷ ಮತ್ಯಾಸ್ಲಲಕ್ಷಸಂಖ್ಯೈವಮೇವಹಿ ।
ಲಕ್ಷಾಣಾಂ ನವತೇರಷ್ಟಕಸ್ಯಚ್ಚೈವಂ ವ್ಯಯೇಕೃತೇ ॥೨೦॥
ಸಹಸ್ರ ಸಂಖ್ಯಯೈವಸ್ಯಾಚ್ಛಿಷ್ಟ ಲಕ್ಷದ್ವಯವ್ಯಯಃ ।
ಅಷ್ಟಾವಿಂಶತ್ಸಹಸ್ರಾಣಿ ಯೋಜನಾನಿಭುವೋಽಭವನ್ ॥೨೧॥
ಷಟ್ಪಂಚಾಶತ್ಸಹಸ್ರಾಣಿ ತಮಸಃಕ್ರಮಶೋಽಭವನ್ ।
ಸಹಸ್ರಾಣಾಂ ದ್ವಾದಶಕಂ ಶತಂಚಾಭೂದ್ಘನೋದಕೇ ॥೨೨॥
ಸಹಸ್ರಾಣಾಂ ಶತಸ್ಯೈವಂ ಸಷಟ್ಕನವತೇರ್ವ್ಯಯೇ ।
ಚತ್ವಾರ್ಯತ್ರ ಸಹಸ್ರಾಣಿಯಾನಿ ಶಿಷ್ಟಾನಿ ತಾನಿಚ ॥೨೩॥

ಶತ್ತೈರೇವ ವಿಭಜ್ಯಾನಿ ತತ್ಪಂಚಶತಯೋಜನಾ ।
ಭೂಃ ಸ್ಯಾತ್ತಮಶ್ಚತೇನಾಭೂತ್ ದ್ವಿಪಂಚಶತಯೋಜನಂ ॥೨೪॥
ಘನೋದಕಂ ಚತುರ್ಭಿಸ್ತದ್ವ್ಯಕ್ತಂ ಪಂಚಶತ್ಯೈರಭೂತ್ ।
ಏವಂಚಾರ್ಧ ಸಹಸ್ರಸ್ಯತ್ರಿಸಹಸ್ರ್ಯಾಃ ವ್ಯಯೇಕೃತೇ ॥೨೫॥
ಯಾ ಚಾತ್ರೋರ್ವರಿತಾ ಪಂಚಶತೀ ತತ್ರಾಪಿ ಸಪ್ತತಿಃ ।
ಯೋಜನಾನಿ ಪೃಥಿವ್ಯಾಸ್ಯುಸ್ತಮಸಸ್ತು ಶತಂತಥಾ ॥೨೬॥
ಚತ್ವಾರಿಂಶದ್ಯೋಜನಾನಿ ಘನೋದಕಮತಃಪರಂ ।
ದ್ವಿಶತೇನ ತಥಾಶೀತ್ಯಾ ಯೋಜನಾನಾಮಭೂನ್ಮಹತ್ ॥೨೭॥
ಏವಂ ನವತ್ಯಾ ಸಂಯುಕ್ತೇ ಗತೇ ಶತ ಚತುಷ್ಟಯೇ ।
ಯೋಜನಾನಾಂ ಯದ್ದಶಕಮವಶಿಷ್ಟಂ ತತೋಪಿಚ ॥೨೮॥
ಏಕಂಪೃಥಿವ್ಯಾಸ್ತಮಸೋ ದ್ವಯಮಂತ್ಯೇ ಚತುಷ್ಟಯಂ ।
ಏವಂ ಸಪ್ತವ್ಯಯೇ ಜಾತೇ ಯದತ್ರೋರ್ವರಿತಂ ತ್ರಿಕಂ ॥೨೯॥
ತಸ್ಯಚದ್ವಾದಶ ಕ್ರೋಶಾನ್ ಕೃತ್ವೈವ ವಿಭಜೇದ್ಬುಧಃ ।
ಸಾರ್ಧಕ್ರೋಶಃಪೃಥಿವ್ಯಾಃಸ್ಯಾತ್ ತಮಸೋಪಿತ್ರಯಂಸ್ಮೃತಂ ॥೩೦॥
ಕ್ರೋಶಾನಾಂಯದ್ಬಹಿಷ್ಠೇಸ್ಯಾತ್ಕ್ರೋಶಷಟ್ಕಂ ಘನೋದಕೇ ।
ಏವಂಚಕ್ರೋಶದಶಕೇ ಕ್ರೋಶಾರ್ಧೇಚವ್ಯಯೀಕೃತೇ ॥೩೧॥
ಸಾರ್ಧಕ್ರೋಶೋತ್ರ ಶಿಷ್ಟಃಸ್ಯಾದ್ದಂಡೈಸ್ತಂ ವಿಭಜೇದ್ಬುಧಃ ।
ಹಸ್ತೈಶ್ಚತುರ್ಭಿರ್ದಂಡಂಸ್ಯಾದ್ದಂಡಾನಾಂತು ಸಹಸ್ರಕಂ ॥೩೨॥
ಕ್ರೋಶ ಇತ್ಯುಚ್ಯತೇಸದ್ಭಿಸ್ತಚ್ಚತುಷ್ಕಂತು ಯೋಜನಂ ।
ಏವಂಚಸಾರ್ಧಕ್ರೋಶಸ್ಯ ದಂಡಾನಾಂಸ್ಯಾತ್ಸಹಸ್ರಕಂ ॥೩೩॥
ತಥಾಪಂಚಶತಂಚೈವ ತಾಂಶ್ಚಾಪಿ ವಿಭಜೇದ್ಬುಧಃ ।
ದಂಡಾನಾಂ ದ್ವಿಶತಂಚೈವ ಚತುರ್ದಶಕಮೇವಚ ॥೩೪॥
ಭೂಮೇಃ ಪ್ರಕಲ್ಪಯೇದ್ವಿದ್ವಾಂ ಸ್ತಮಶಶ್ಚ ಚತುಃಶತಂ ।
ಅಷ್ಟಾವಿಂಶಚ್ಚದಂಡಾಃಸ್ಯುಃ ಘನೋದಕ ಮಹಾಂಬುಧೇಃ ॥೩೫॥
ಶತಾನಾಮಷ್ಟಕಂ ಪಂಚಾಶಚ್ಚ ಷಡ್ದಂಡ ಸಂಯುತಂ ।
ಏವಂ ದಂಡಸಹಸ್ರಸ್ಯ ತಚ್ಚತುಶ್ಶತಕಸ್ಯಚ ॥೩೬॥

ಅಷ್ಟೋತ್ತರಾಯಾಃ ನವತೇಶ್ಚೋಕ್ತ ನ್ಯಾಯಾದ್ವ್ಯಯೋಕೃತೇ ।
ದಂಡದ್ವಯಸ್ಯ ಶಿಷ್ಟಸ್ಯ ಹಸ್ತಾಷ್ಟಕ ಮುದೀರಿತಂ ॥೩೭॥
ತತ್ರಭೂಮೇರೇಕ ಹಸ್ತಸ್ತಮಸೋಡೋರ್ದ್ವಯಂ ಸ್ಮೃತಂ ।
ಘನೋದಕಸ್ಯ ಹಸ್ತಾನಾಂ ಚತುಷ್ಟಯ ಮುದೀರಿತಂ ॥೩೮॥
ಹಸ್ತಾನಾಂ ಸಪ್ತಕೇತ್ವೇವಂ ಗತೇಯೋತ್ರಾವ ಶಿಷ್ಯತೇ ।
ಏಕೋಹಸ್ತಸ್ತಸ್ಯಚಾಪಿ ಚತುರ್ವಿಂಶಾಂಗುಲಂ ಸ್ಮೃತಂ ॥೩೯॥
ತತ್ರಭೂಮೇರಂಗುಲೀನಾಂ ತ್ರಯಂಸ್ಯಾತ್ತಮಸಸ್ತುಷಟ್ ।
ಘನೋದಸ್ಯದ್ವಾದಶಾಸ್ಯುರೇವಂ ಚಾಂಗುಲಯೋಗತಾಃ ॥೪೦॥
ಏಕವಿಂಶತಿ ಸಂಖ್ಯಾತಾಃ ಪುನರುರ್ವರಿತಂತ್ರಿಕಂ ।
ನವವ್ರೀಹಿಪ್ರಮಾಣಂ ಸ್ಯಾತ್ತತ್ರ ಭೂವ್ರೀಹಿಸಮ್ಮಿತಾ ॥೪೧॥
ವ್ರೀಹಿದ್ವಯೇತಂತು ತಮೋಘನೋದಂಚ ವಿಚಾರಣೇ ।
ಚತುರ್ವ್ರೀಹಿ ಪ್ರಮಾಣೇನ ಸಹಿತಂ ಸ್ಯಾದ್ಬುಹಿಸ್ಥಿತಂ ॥೪೨॥
ವ್ರೀಹೀಣಾಂ ಸಪ್ತಕೇತ್ವೇವಂ ಗತೇಸತಿಚಯತ್ಪುನಃ ।
ವ್ರೀಹಿದ್ವಯಂಚ ಶಿಷ್ಟಂಸ್ಯಾತಚ್ಚಾಪಿ ವಿಭಜೇದ್ಬುಧಃ ॥೪೩॥
ಏಕೋವ್ರೀಹಿಸ್ಸರ್ಷಪಾಣಾಂ ಸಪ್ತಕೋಪಮಿತಃ ಕಿಲ ।
ಏವಂಚವ್ರೀಹಿಯುಗ್ಮಸ್ಯ ಸರ್ಷಪಾಸ್ಯುಃ ಚತುರ್ದಶ ॥೪೪॥
ತತ್ರಭೂಮೇಸ್ಸರ್ಷಪಯೋರ್ದ್ವಯಂ ಯೋಜ್ಯಂತಮಸ್ಯಪಿ ।
ಚತುಷ್ಟಯಂ ಸರ್ಷಪಾಣಾಂ ಘನೋದೇತ್ವಷ್ಟಕಂ ಸ್ಮೃತಂ ॥೪೫॥
ಇಯಂ ಭೂಗೋಳಮರ್ಯಾದಾ ಶ್ರುತಿಮೂಲಾಯತೋಖಿಲಾ ।
ಅತೋಸ್ಯಾ ಅವಿರೋಧೇನ ಸರ್ವತ್ರಾರ್ಥಂ ವದೇದ್ಗಿರಾಂ ॥೪೬॥
ಏವಂಚ ಯತ್ಪುರಾಣೋಕ್ತಂ ಸಪ್ತಾಂಶ ಶತಪಂಚಕಂ ।
ಭುವೋಮಾನಾಯ ಹರಿಣಾ ತತ್ಪಂಚಶತಯೋಜನಂ ॥೪೭॥
ತಸ್ಯೈವಸಪ್ತಮೋಯೋಂಶಸ್ತ್ವೇಕ ಸಪ್ತತಿ ರೂಪಕಃ ।
ಅಸ್ಮದುಕ್ತಾಧಿಕಾಂಶೇನ ಯುತಸ್ಯಚ ಬಲಾದಭೂತ್ ॥೪೮॥
ಯತಃ ಕೃತೇಯುಗೇ ಪುಂಸಾಂ ಧಾನ್ಯಾದೀನಾಂಚ ಸರ್ವಶಃ ।
ಸ್ಥೂಲತಾ ತೇನ ತತ್ಕಾಲೇ ಸರ್ಷಪೈಸ್ಸಪ್ತಭಿರ್ಯುತಃ ॥೪೯॥



ವ್ರೀಹಿಷ್ಟ ಸ್ಥೂಲಏವ ಸ್ಯಾತ್ ತ್ರೈಸ್ರಿಭಿಃಕಥಿತಾಂಗುಲೀ ।
ಯುಗಾಂತರಸ್ಥಾಂಗುಲಿಭಿರೀಷತ್‌ಸ್ಥೂಲಂ ಭವೇದ್ಧ್ರುವಂ ॥೫೦॥

ತನ್ಮೂಲಹಸ್ತದಂಡಾದೇಃ ಸ್ಥೌಲ್ಯಸ್ತತ್ಕಾಲ ಕಲ್ಪಿತಂ ।
ಯೋಜನಂಚ ಭವೇತ್‌ಸ್ಥೂಲಂ ತದ್ಯುಗಾದೌಕೃತಾಮುಹೇ ॥೫೧॥

ತೈರೇವಯೋಜನೈಃಸೃಷ್ಟಾ ಕಲ್ಪಾದೌಕಿಲ ವಿಷ್ಣುನಾ ।
ಭೂಗೋಳವಿಸ್ತೃತಿರ್ಗ್ರಾಹ್ಯಾ ತತ್ಕಾರ್ತಯುಗ ಯೋಜನೈಃ ॥೫೨॥

[ಹಿಂದೆ ಹೇಳಿದಂತೆ ಭೂಭಾಗ, ತಮೋಭಾಗ, ಘನೋದಕ ಭಾಗಗಳಲ್ಲಿ 49 ಕೋಟಿ ಯೋಜನಗಳ ಹಂಚಿಕೆಯಾಯಿತು. $(7+14+28=49)$. ಉಳಿದ ಒಂದು ಕೋಟಿ ಯೋಜನವನ್ನು ಲಕ್ಷಗಳ ಎಣಿಕೆಯಿಂದ ಗ್ರಹಿಸಬೇಕು. ಈ 100 ಲಕ್ಷ ಯೋಜನಗಳಲ್ಲಿ ಭೂಭಾಗಕ್ಕೆ 14 ಲಕ್ಷ, ತಮೋಭಾಗಕ್ಕೆ 28 ಲಕ್ಷ ಮತ್ತು ಘನೋದಕ ಭಾಗಕ್ಕೆ 28 ಲಕ್ಷ ಯೋಜನಗಳನ್ನು ಹಂಚಿದಾಗ, 98 ಲಕ್ಷಗಳ ಹಂಚಿಕೆಯಾಗಿ 2 ಲಕ್ಷ ಯೋಜನಗಳು ಉಳಿಯುವುವು. ಇದನ್ನು ಸಾವಿರಗಳಲ್ಲಿ ಗ್ರಹಿಸಿದರೆ 200 ಸಾವಿರ ಯೋಜನಗಳಾಗುವುವು. ಇದರಲ್ಲಿ ಭೂಮಿಗೆ 28 ಸಾವಿರ, ತಮೋಭಾಗಕ್ಕೆ 56 ಸಾವಿರ ಮತ್ತು ಘನೋದಕಕ್ಕೆ 112 ಸಾವಿರ ಯೋಜನಗಳನ್ನು ಹಂಚಿದರೆ, 196 ಸಾವಿರ ಯೋಜನಗಳ ಹಂಚಿಕೆಯಾಗಿ, 4 ಸಾವಿರ ಯೋಜನಗಳು ಉಳಿಯುವುವು. ಇದನ್ನು 40 ನೂರುಗಳೆಂದು ಭಾವಿಸಬೇಕು. 5 : 10 : 20 ರ ಪ್ರಮಾಣದಲ್ಲಿ ಇದನ್ನು ಮೂರು ಭಾಗಗಳಿಗೆ ಹಂಚಿದಾಗ, 35 ನೂರು ಯೋಜನಗಳು ವೆಚ್ಚವಾಗಿ, 5 ನೂರು ಯೋಜನಗಳು ಉಳಿಯುವುವು. ಮತ್ತೆ 70 : 140 : 280 ರ ಪ್ರಮಾಣದಲ್ಲಿ ಹಂಚಿದಾಗ, 490 ಯೋಜನಗಳ ಹಂಚಿಕೆಯಾಗಿ, ಹತ್ತು ಯೋಜನಗಳು ಉಳಿಯುವುವು. ಇದನ್ನು 1 : 2 : 4 ಪ್ರಮಾಣದಲ್ಲಿ ಹಂಚಿದಾಗ, 3 ಯೋಜನಗಳು ಮಾತ್ರ ಉಳಿಯುವುವು.

ಬುದ್ಧಿವಂತರಾದವರು ಈ 3 ಯೋಜನಗಳನ್ನು 12 ಕ್ರೋಶಗಳೆಂದು ಪರಿಗಣಿಸಬೇಕು. (1 ಯೋಜನ=4 ಕ್ರೋಶಗಳು).

ಇಲ್ಲಿಂದ ಮುಂದಿನ ಹಂಚಿಕೆ ಹೀಗಿದೆ–$1\frac{1}{2}$ : 3 : 6. 12 ರಲ್ಲಿ $10\frac{1}{2}$ ಕ್ರೋಶಗಳ ವ್ಯಯವಾಗಲು $1\frac{1}{2}$ ಕೋಶಗಳು ಉಳಿಯುವುವು. 1000 ದಂಡಗಳ

ಪ್ರಮಾಣ 1 ಕ್ರೋಶ ; 4 ಕ್ರೋಶಗಳು=1 ಯೋಜನ. ಆದುದರಿಂದ $1\frac{1}{2}$ಕ್ರೋಶ ಎಂದರೆ 1500 ದಂಡಗಳ ಅಳತೆಯಾಯಿತು. ಇದರಲ್ಲಿ ಭೂಮಿಗೆ 214, ತಮಸ್ಸಿಗೆ 428 ಮತ್ತು ಅದರ ಹೊರಗಿನ ಭಾಗಕ್ಕೆ 856 ಯೋಜನಗಳನ್ನು ಹಂಚಲು, ಇದರ ಮೊತ್ತ 1498 ದಂಡಗಳ ಅಳತೆ. ಉಳಿದ 2 ದಂಡಗಳ ಅಳತೆಯನ್ನು 8 ಹಸ್ತಗಳೆಂದು ಭಾವಿಸಬೇಕು. (ಮೊಳಕ್ಕೆ ಅಳತೆ) ; ಏಕೆಂದರೆ, 4 ಹಸ್ತಗಳ ಅಳತೆಗೆ ಒಂದು ದಂಡ ಎಂದು ಹೆಸರು. ಇದನ್ನು 1 : 2 : 4 ಪ್ರಮಾಣದಲ್ಲಿ ಹಂಚಿದರೆ ಒಂದು ಹಸ್ತವು ಮಾತ್ರ ಇನ್ನೂ ಹಂಚಿಕೆಯಾಗದೆ ಉಳಿಯುವುದು. ಒಂದು ಹಸ್ತ ಎಂದರೆ 24 ಅಂಗುಲಗಳ ಪ್ರಮಾಣ. ಮತ್ತೆ 3: 6: 12 ರ ಪ್ರಮಾಣ ದಲ್ಲಿ ಹಂಚಿದರೆ, 3 ಅಂಗುಲಗಳು ಹಂಚಿಕೆಯಾಗದೆ ಉಳಿಯುವುವು. 3 ಭತ್ತದ ಕಾಳುಗಳನ್ನು ಎಡಬಿಡದೆ ಒಂದರ ಮುಂದೆ ಒಂದನ್ನು ಕೂಡಿಸಿದಾಗ ಆಗುವ ಉದ್ದಕ್ಕೆ ಒಂದು ಅಂಗುಲ ಎಂಬ ಸಂಕೇತ. ಮೂರು ಅಂಗುಲಗಳೆಂದರೆ 9 ಭತ್ತದ ಕಾಳುಗಳ (ವ್ರೀಹಿಗಳ) ಅಳತೆ. ಇದನ್ನು ಹಂಚಿದಾಗ (1: 2: 4) ಇನ್ನೂ 2 ವ್ರೀಹಿಗಳ ಅಳತೆಯು ಹಂಚಿಕೆಯಾಗದೆ ಉಳಿಯುವುದು.

7 ಸಾಸುವೆ ಕಾಳುಗಳನ್ನು ಜೋಡಿಸಿದರೆ ಆಗುವ ಉದ್ದ ಒಂದು ವ್ರೀಹಿ. ಆದುದರಿಂದ 2 ವ್ರೀಹಿಗಳೆಂದರೆ 14 ಸರ್ಷಪಗಳ ಪ್ರಮಾಣ. 2: 4: 8 ರ ಪ್ರಮಾಣದಲ್ಲಿ ಇದನ್ನು ಮೂರು ಭಾಗಗಳಿಗೂ ಹಂಚಿದಾಗ ಶೇಷವೇನೂ ಉಳಿಯು ವುದಿಲ್ಲ. ಲೆಕ್ಕಾಚಾರದಂತೆ, 50 ಕೋಟಿ ಯೋಜನಗಳನ್ನು ಪರಿಪೂರ್ಣವಾಗಿ ಹಂಚಿದಂತಾಗುವುದು.

ಇದು ಅಳತೆಗಳ ವೈದಿಕ ಪದ್ಧತಿ. ಎಲ್ಲಾ ಬಗೆಯ ಅಳತೆಗಳನ್ನೂ ಇದರ ಕ್ರಮದಲ್ಲಿಯೇ ಅನ್ವಯಿಸಬೇಕು. ಶ್ರೀ ವೇದವ್ಯಾಸ ರೂಪದಿಂದ ಅವತರಿಸಿ ಬಂದ ಶ್ರೀ ಹರಿಯು ಬ್ರಹ್ಮಾಂಡದ ಅಳತೆಗಳ ವಿಚಾರವನ್ನು ತಿಳಿಸಿಕೊಟ್ಟಿರುವ ಕ್ರಮವೇ ಇದು. ಈಗ ಹೇಳಿದುದು ಏಳು ಅಂಶಗಳಲ್ಲಿ ಒಂದು ಎಂಬ ವಿಧಾನ. ಇದರ ಪ್ರಕಾರ, ಬ್ರಹ್ಮಾಂಡದ ಒಳಭಾಗದ ಅಳತೆಯು 50 ಕೋಟಿ ಯೋಜನ ವೆಂದಾಗುವುದು. 7 : 14 : 28 ರ ಮೊತ್ತಕ್ಕೆ ಕ್ರಮವಾಗಿ ಉಳಿದ ಒಂದು ಕೋಟಿಯ ಅಂಶಗಳನ್ನು ಕೂಡಿಸಿದಾಗ 50 ಕೋಟಿಯಾಗುವುದು.

(ಟಿಪ್ಪಣಿ: 1) ಇಲ್ಲಿ ನಾವು ಗಮನಿಸಬೇಕಾದ ಮುಖ್ಯಾಂಶವೆಂದರೆ, ಅಳತೆಗಳ ಹಂಚಿಕೆಯು ಸಾಸುವೆ ಕಾಳಿನಷ್ಟು ಸೂಕ್ಷ್ಮವಾದ ಅಂಶಗಳನ್ನೂ ಗಣನೆಗೆ

ತೆಗೆದುಕೊಂಡು, ಪರಿಪೂರ್ಣವಾಗಿರುವುದು. ಕಡೆಗೆ ಉಳಿದ 2, 4, 8 ಸಾಸುವೆ ಕಾಳಿನ ಪ್ರಮಾಣಗಳನ್ನು ಎರಡೂ ಕಡೆಯ ಅಂಚುಗಳಿಗೆ ಹಂಚಿದಾಗ ಲೆಕ್ಕಾಚಾರ ಸರಿಹೋಗುವುದು ; ಪರಮಾತ್ಮನ ಸೃಷ್ಟಿಚಾತುರ್ಯವು ವೇದ್ಯವಾಗುವುದು).

ಟಿಪ್ಪಣಿ : (2) ಅಳತೆಗಳ ಕೋಷ್ಟಕ

| | | |
|---|---|---|
| 7 ಸರ್ಷಪಗಳು | — | 1 ವ್ರೀಹಿ |
| (ಸಾಸುವೆ ಕಾಳುಗಳು) | — | (ಭತ್ತದ ಕಾಳಿನ ಉದ್ದ) |
| 3 ವ್ರೀಹಿಗಳು | — | 1 ಅಂಗುಲ |
| 24 ಅಂಗುಲಗಳು | — | 1 ಹಸ್ತ (ಮೊಳದುದ್ದ) |
| 4 ಹಸ್ತಗಳು | — | 1 ದಂಡ ( ಪುರುಷ ಪ್ರಮಾಣ) |
| 1000 ದಂಡಗಳು | — | 1 ಕ್ರೋಶ |
| 4 ಕ್ರೋಶಗಳು | — | 1 ಯೋಜನ |

32,000 ಅಡಿಗಳು ಅಥವ 6.06 ಮೈಲಿ.

| ವಿಭಾಗ | ಯೋಜನ | ಕ್ರೋಶ | ದಂಡ | ಹಸ್ತ | ಅಂಗುಲ | ವ್ರೀಹಿ | ಸರ್ಷಪ |
|---|---|---|---|---|---|---|---|
| ಭೂಭಾಗ | 7,14,28,571 | $1\frac{1}{2}$ | 214 | 1 | 3 | 1 | 2 |
| ತಮೋಭಾಗ | 14,28,57,142 | 3 | 428 | 2 | 6 | 2 | 4 |
| ಘನೋದಕ | 28,57,14,284 | 6 | 856 | 4 | 12 | 4 | 8 |

(ಇಂತಹ ಗಣಿತವನ್ನು ಶ್ರೀ ವಾದಿರಾಜರು ಈಗಿನ ಶಾಲೆಗಳಲ್ಲಿ ಕಲಿತವರಲ್ಲ. ಅವರು ವೈದಿಕ ಗಣಿತ ಶಾಸ್ತ್ರದ ಪ್ರತಿನಿಧಿಯೇ ಆಗಿದ್ದರು. ಈಗಿನ ಚರಿತ್ರಕಾರರು ಹೇಳುವಂತೆ, ದನಕಾಯುವ ವೃತ್ತಿಯೇ ಮುಖ್ಯವಾಗಿದ್ದ ಆರ್ಯರೆಂಬುವರು ಪಂಜಾಬಿನಲ್ಲಿ ಬಂದು ನೆಲೆಸಿದ ಕೂಡಲೇ ಗಣಿತ ಶಾಸ್ತ್ರವನ್ನು ಇಷ್ಟು ಸಮಗ್ರವಾಗಿ ರೂಢಿಸಿಕೊಳ್ಳಲು ಸಾಧ್ಯವಾಗುತ್ತಿದ್ದಿತೆ ? ಇದರಿಂದ, ಈಗಿನವರು ನೆಚ್ಚಿರುವ ವಿಕಾಸವಾದವು ನಂಬಿಕೆಗೆ ಅರ್ಹವಲ್ಲ ಎಂದ ಹಾಗಾಯಿತು. ಋಷಿಗಳು ಸಕಲ ವಿದ್ಯೆಗಳ ಗಣಿಯಾದ ವೇದಗಳನ್ನು ಕಂಡರೇ ಹೊರತು, ರಚಿಸಲಿಲ್ಲ.)

7, 70 ಮುಂತಾದವುಗಳ ಪ್ರಮಾಣಾಂಶಗಳನ್ನು ಕೂಡಿಸಿ, 1 ಕೋಟಿ ಯೋಜನದ ವಿಭಾಗಗಳನ್ನು 49 ಕೋಟಿಗೆ ಸೇರಿಸಿದಾಗ 50 ಕೋಟಿ ಯೋಜನದ

ಲೆಕ್ಕಾಚಾರ ಸರಿಯಾಯಿತು. ಅದು ಬ್ರಂಹ್ಮಾಂಡಾಂತರಾಳದ ಅಳತೆ. ಕೃತಯುಗ ದಲ್ಲಿ ಧಾನ್ಯದ ಕಾಳುಗಳು ಮುಂತಾದವು ಈಗ ಕಲಿಯುಗದಲ್ಲಿರುವುದಕ್ಕಿಂತ ಗಾತ್ರದಲ್ಲಿ ಸ್ವಲ್ಪ ದೊಡ್ಡವಾಗಿದ್ದುದರಿಂದ, ಇದುವರೆಗೆ ಹೇಳಿದ ಅಳತೆಗಳು ಅಂತಹ ಕಾಳುಗಳ ಪ್ರಮಾಣ ಪ್ರಮಿತವಾದುವೆಂದು ತಿಳಿಯಬೇಕು. ಇಂತಹ ಎಲ್ಲಾ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡೇ ಪೂರ್ವಿಕರಾದ ಋಷಿಗಳು ಬ್ರಹ್ಮಾಂಡ ಖರ್ಪರದೊಳಗಿನ ಅಳತೆಯು 50 ಕೋಟಿ ಎಂದು ನಿರ್ಧರಿಸಿರುವರು.

(ಟಿಪ್ಪಣಿ: 'ಕಾಳು ಕೋಳಿ ಮೊಟ್ಟೆಯ ಗಾತ್ರ' ಎಂದು ರಷ್ಯನ್ ಕವಿವರ ಟಾಲ್‌ಸ್ಟಾಯ್ ಬರೆದಿರುವ ಕಥೆಯನ್ನು ನೋಡಿದರೆ, ಬಹು ಹಿಂದಿನ ಕಾಲದಲ್ಲಿ ಧಾನ್ಯದ ಕಾಳುಗಳು ಹೆಚ್ಚು ಗಾತ್ರವುಳ್ಳವುಗಳಾಗಿ, ಹೆಚ್ಚುರುಚಿಕರವಾಗಿದ್ದುವೆಂಬುದು ತಿಳಿದುಬರುತ್ತದೆ ; ಈ ಭಾವನೆಯು ಕೇವಲ ನಮ್ಮ ಪುರಾಣಗಳಿಗೆ ಸೀಮಿತ ವಾದುದಲ್ಲ; ಪ್ರಪಂಚದ ಎಲ್ಲಾಪ್ರಾಚೀನ ಗ್ರಂಥಗಳಿಗೂ ಸಮ್ಮತವಾದದು ಎಂಬುದು ವೇದ್ಯವಾಗುತ್ತದೆ. ಈ ಕಲಿಯುಗದಲ್ಲಿ ಮೊಳಕೈ ಉದ್ದ ಎಂದರೆ ಕೇವಲ 18 ಅಂಗುಲ; ಆದರೆ ಕೃತ ಯುಗದಲ್ಲಿ ಅದು 24 ಅಂಗುಲ. ಎಂದರೆ, ಆಗಿನ ಕಾಲದ ಮಾನವರ ಎತ್ತರ ಎಂಟು ಅಡಿ. ಶ್ರೀಮನ್ಮಧ್ವಾಚಾರ್ಯರು ಕೃತಯುಗದ ಮಾನವರಂತೆ ಎಂಟು ಅಡಿ ಎತ್ತರದ ಆಜಾನುಬಾಹುವಂತೆ ! ಜನಸಂದಣಿಯಲ್ಲಿ ಅವರು ಬರುತ್ತಿದ್ದರೆ, ದೂರವಿದ್ದವರಿಗೂ ಕಾಣುವಷ್ಟು ಎತ್ತರವಾಗಿದ್ದರಂತೆ).

ಭೂಮಿಯ ಸೃಷ್ಟಿಯಾದುದು ಕೃತಯುಗದ ಆರಂಭಕಾಲದಲ್ಲಿ; ಆದುದರಿಂದ ಇದುವರೆಗೆ ಹೇಳಿದ ಅಳತೆ ಪ್ರಮಾಣಗಳು ಆ ಕಾಲದ ಅಳತೆ ಪ್ರಮಾಣಗಳಿಗೆ ಅನುಗುಣವಾದುವು. ಶ್ರೀ ಮಹಾ ವಿಷ್ಣುವು ಬ್ರಹ್ಮನ ಪ್ರಥಮ ಕಲ್ಪದ (ಪದ್ಮ ಕಲ್ಪದ) ಮೊದಲನೇ ಕೃತಯುಗದಲ್ಲಿ ಭೂಮ್ಯಾದಿಗಳನ್ನು ಸೃಷ್ಟಿಸಿದನೆಂದು ತಿಳಿಯಬೇಕು.

(ಟಿಪ್ಪಣಿ: ಹಿಂದೆ ಹೇಳಿದ ಪದ್ಮಕಲ್ಪ, ಶ್ವೇತವರಾಹ ಕಲ್ಪಗಳ ವಿಚಾರ ವನ್ನಿಲ್ಲಿ ನೆನಪಿಗೆ ತಂದುಕೊಳ್ಳಬೇಕು).

### ಭೂಭಾಗದ ವಿವರಣೆ

ಏವಂಚಪೃಥಿವೀ ಸೇಯಂ ಸಸಪ್ತದ್ವೀಪ ಸಾಗರಂ ।
ಲಕ್ಷಯೋಜನ ವಿಸ್ತಾರಂ ಮಧ್ಯಸ್ಥದ್ವೀಪತಃ ಕ್ರಮಾತ್ ॥೫೫॥

ವಿಶ್ವತಃ ಪರಿವಾರ್ಯೈನಂ ಸ್ಥಿತೈಃ ಸಪ್ತಭಿರಬ್ಧಿಭಿಃ ।
ದ್ವೀಪೈಶ್ಚಾನ್ಯೈಃ ಕ್ರಮೋಣೈವ ದ್ವಿಗುಣೈಃ ಪೂರ್ವಪೂರ್ವತಃ ॥೫೭॥
ಯುಕ್ತಾಭೂತ್ಸ್ವರ್ಣ ಭೂಮ್ಯಂತಃ ಕೋಟಿಸಂಚಕ ಯೋಜನಂ ।
ಲಕ್ಷೈಶ್ಚ ಸಪ್ತಭಿರ್ಯುಕ್ತಾ ನಿತ್ಯಮಾಸೀದ್ವಿಚಾರಣೇ ॥೫೭॥
ಹೈಮೀ ಭೂಮಿಶ್ಚ ಸರಿತಃ ಸಂಸ್ಥಿತಾಂತಿಮ ಸಾಗರಾತ್ ।
ವಜ್ರಲೇಪೋಜ್ಜ್ವಲದ್ಬಾಹ್ಯಭಾಗಾ ಭಾಸ್ವನ್ನಿವಪ್ರಭಾ ॥೪೮॥

ಹಿಂದೆ ಹೇಳಿದ ಪ್ರಕಾರ ಅಳತೆಗಳ ದೃಷ್ಟಿಯಿಂದ ಭೂಮಿ ಎಂಬುದು ಸಪ್ತ ದ್ವೀಪ ಸಪ್ತಸಾಗರಗಳಿಂದ ಕೂಡಿರುವುದು. ಅವುಗಳಲ್ಲಿ ಮಧ್ಯಗತವಾದ ದ್ವೀಪವು ಒಂದು ಲಕ್ಷಯೋಜನ. ಇವುಗಳಲ್ಲಿ ಹೊರಹೊರಗಿನ ದ್ವೀಪಗಳು ಮತ್ತು ಸಾಗರಗಳು ತಮ್ಮ ಒಳಿಯ ಒಳಗಿನವುಗಳಿಗಿಂತ ಎರಡೆರಡರಷ್ಟು ಹೆಚ್ಚು ವಿಸ್ತಾರವಾದುವು. ಆದುದರಿಂದ, ವೃತ್ತಾಕಾರದ ದ್ವೀಪಗಳಿಂದಲೂ, ಸಾಗರಗಳಿಂದಲೂ ಕೂಡಿರುವ ಭೂಮಂಡಲದ ವ್ಯಾಸ 5 ಕೋಟಿ 7 ಲಕ್ಷ ಯೋಜನಗಳು. ಇದನ್ನು ಸುತ್ತುವರಿದು ಸುವರ್ಣಮಯ ಭೂಮಿಯೂ, ಅದನ್ನು ಸುತ್ತುವರಿದು ಥಳಥಳಿಸುವ ವಜ್ರಲೇಪ ಅಥವ ವಜ್ರಭೂಮಿಯೂ ಇರುವುವು.

ಅಂತ್ಯಾರ್ಧಸ್ಥಳಮಿತಿ ಪ್ರೋಕ್ತಾಸಾಚ ವಿವಿಚ್ಯತೇ ।
ದ್ವಿಪಂಚಾಶತ್ ಸಹಸ್ರಾಚ ಕೋಟಿಮೂಲಕೃತೈವಹಿ ॥೫೯॥
ಲೋಕಾಲೋಕ ಕೃತೇರ್ಮಾನ ಸಂಖ್ಯಾಸಂಕೀರ್ತಿತಾಸ್ಫುಟಂ ।
ಅತಃ ಷಟ್ಕೋಟಯೋ ಲಕ್ಷಸಪ್ತಕಂ ಲಕ್ಷಮೇವಚ ॥೬೦॥
ಸಿದ್ಧಂಬ್ರಹ್ಮಭುವೋನ್ಯಸ್ಯಭೂಮಿಭಾಗಸ್ಯ ಕೇವಲಂ ।
ಏವಂಚ ಸಪ್ತ ಕೋಟೀಸಾಂಪ್ರಾಗುರ್ವರಿತ ಕೋಟಿತಃ ॥೬೧॥
ಲಬ್ಧಾನಾಂ ದಶಲಕ್ಷಾಣಾಂ ಚತುರ್ಲಕ್ಷ್ಯಾಶ್ಚಪೂರ್ತಯೇ ।
ಏಕಾಕೋಟಿಶ್ಚ ಲಕ್ಷಾಣಾಂ ಷಟ್ಕಮೇವಹ್ಯಪೇಕ್ಷಿತಂ ॥೬೨॥

'ಅಂತ್ಯಾರ್ಧಸ್ಥಳ' ಎಂಬುದರ ವಿಚಾರವನ್ನೀಗ ವಿವೇಚಿಸಲಾಗುವುದು. ಎರಡು ಐವತ್ತು ಸಾವಿರ ಎಂದರೆ ಒಂದು ಲಕ್ಷ. ಇದು ಎರಡು ಐವತ್ತು ಲಕ್ಷ ಎಂದರೆ ಒಂದು ಕೋಟಿ ಎಂದ ಹಾಗೆ. ಭೂಮಂಡಲವನ್ನು ಬೃಹದಾಕಾರದ ಕೋಟೆಯಂತೆ ಸುತ್ತುವರೆದು ನಿಂತಿರುವ ಲೋಕಾಲೋಕ ಪರ್ವತದ ಅಳತೆಯನ್ನು ಕುರಿತು

ಹೇಳುವಾಗ ಆ ರೀತಿ ಪದ ಪ್ರಯೋಗವಾಗಿದೆ. ಬ್ರಹ್ಮಭೂಮಿಯ ಹೊರತು ಉಳಿದ ಭೂಭಾಗದ ವಿಸ್ತಾರವು 6 ಕೋಟಿ 8 ಲಕ್ಷ ಎಂದು ಹೇಳಲಾಗಿದೆ. ಒಟ್ಟು ಭೂಮಂಡಲದ ವಿಸ್ತಾರವು 7 ಕೋಟಿ 14 ಲಕ್ಷ ಎಂದು ನಿರ್ಣಯವಾಗಿರುವಾಗ, ಆಸಂಖ್ಯೆಯನ್ನು ಪಡೆಯಲು ಅಗತ್ಯವಾಗಿರುವುದ (7.14–6.08) 1 ಕೋಟಿ, 6 ಲಕ್ಷ ಯೋಜನಗಳು ಮಾತ್ರ,

ಅತೋಂತಿಮ ಸಮುದ್ರಸ್ಯಪರಿತೋ ಮಂಡಲಾಕೃತೇಃ ।
ಭಾಗದ್ವಯೇ ಮಿಳಿತ್ವಾಷ್ಟಾವಿಂಶಾಲಕ್ಷಯುತಂತುಯತ್ ॥೬೩॥
ಕೋಟಿಯೋಜನ ಮಾನಂಸ್ಯಾತ್ತತೋಽಪ್ಯರ್ಧಂತು ಯದ್ಭವೇತ್ ।
ಚತುಷ್ಷಷ್ಟ್ಯೈಖ್ಯಮೇತಚ್ಚ ಕಯಾಪ್ಯಧಿಕ ಸಂಖ್ಯಯಾ ॥೬೪॥
ಚತ್ವಾರಿಂಶಲಕ್ಷ ಯುಕ್ತಲಕ್ಷದ್ವಿತಯರೂಪಯಾ ।
ಯುತಮಧ್ಯರ್ದ ಶಬ್ದೋಕ್ತಂ ಶಾಸ್ತ್ರಸಂಖ್ಯಾಪ್ರಪೂರಕಂ ॥೬೫॥

ಏಳನೆಯ ದ್ವೀಪವನ್ನು ಮಂಡಲಾಕಾರವಾಗಿ ಸುತ್ತುವರಿದಿರುವ ಏಳನೆಯ ಸಮುದ್ರದ ವಿಸ್ತಾರವನ್ನು ಹೇಳುವಾಗ, ಉಭಯ ಪಾರ್ಶ್ವಗಳ ವಿಸ್ತಾರದ ಮೊತ್ತವು ಒಂದು ಕೋಟಿ, ಇಪ್ಪತೆಂಟು ಲಕ್ಷ ಯೋಜನಗಳೆಂದು ತಿಳಿದು ಬಂದಿದೆ. ಆದುದರಿಂದ 'ಅಧ್ಯರ್ಧ' ಎಂಬ ಶಬ್ದಕ್ಕೆ ಅರ್ಧಕ್ಕಿಂತ ಸ್ವಲ್ಪ ಹೆಚ್ಚು ಎಂದು ಅರ್ಥ ಮಾಡಿದರೆ, ಅದು 42 ಲಕ್ಷ ಎಂದು ಸಿದ್ಧಿಸುವುದು. ($64 \div \frac{1}{2} = 32 + 10 = 42$) ಇದು ಶಾಸ್ತ್ರಸಮ್ಮತವಾಗುವುದು.

ತತೋಽಪಸರ್ಜನೀ ಭೂತ ವಜ್ರಲೇಪೇನ ಸಂಗತಾ ।
ಅಧಿಶಬ್ದೋಕ್ತ ಸಂಖ್ಯಾಸ್ಯಾದ್ಭಾಗಾಃ ಪ್ರಾಗುದಿತಾಶ್ಚಯೇ ॥೬೬॥
ವಿಶೇಷಣೇಸ್ಮಿನ್ಯ್ಯಜ್ಯೇರನ್ ಶಬ್ದಾರ್ಥೌ ಯತ್ನವಹೌಮತಾ ।
ಅರ್ಧಶಬ್ದೋದಿತಾಸಂಖ್ಯಾ ವಿಶೇಷ್ಯಪದ ಬೋಧಿತಾ ॥೬೭॥
ಯೋಜನಾನಾಂ ಚತುಷ್ಷಷ್ಟಿ ಲಕ್ಷರೂಪ್ರೋಕ್ತವರ್ತ್ಮಸಾ ।
ವಿಶೇಷ್ಯಸ್ವರ್ಣಭೂಮ್ಯೈವ ಯುಕ್ತಾಸ್ಯಾನ್ನತತೋಧಿಕಾ ॥೬೮॥
ಅತೋತ್ರಾಧ್ಯರ್ಧ ಶಬ್ದಸ್ಯಾಪ್ಯೇವಮರ್ಥೋಽಭವೇದ್ಬಲಾತ್ ।
ಅಧ್ಯರ್ಧ ಶಬ್ದಸ್ಯಾರ್ಧಃಸ್ಯಾದಿತ್ಥಮತ್ರ ವಿಚಾರಣೇ ॥೬೯॥

ವಜ್ರಲೇಪದಿಂದ ಸಹಿತವಾದ ಭೂಮಿ ಎಂಬುದು ಅಂತ್ಯಸಾಗರದಳತೆಯ ಅರ್ಧದಷ್ಟು ಎಂದು ಹೇಳಲಾಗಿದೆ.

ಸಮಾನಾರ್ಥಬೋಧಕಗಳಿಗೆ ವಿಶೇಷಣವನ್ನು ಹೊಂದಿಸಬೇಕು. ಅರ್ಧ ಎಂಬ ಶಬ್ದವು ಇಲ್ಲಿ ವಿಶೇಷ್ಯವನ್ನು ಕ:ರಿತಾದುದು. ಆದುದರಿಂದ, ವಿಶೇಷ್ಯಪದವಾದ ಸ್ವರ್ಣಭೂಮಿಯ ಅಳತೆಯು ಅರ್ಧದಷ್ಟು. ಎಂದರೆ, 64 ಲಕ್ಷ ಯೋಜನದಷ್ಟು ಎಂದು ಹೇಳಿದಂತಾಯಿತು. ಈ ಲಕ್ಷಣ ಬಲದಿಂದ ಅಧ್ಯರ್ಧ ಶಬ್ದಕ್ಕೂ ಹೀಗೆಯೇ ಅರ್ಥವನ್ನು ಅನ್ವಯಿಸಿದರೆ, ಅದು ಎಷ್ಟೆಂಬುದು ನಿಶ್ಚಯವಾಗುತ್ತದೆ.

(ಅರ್ಧಕ್ಕಿಂತ ಸ್ವಲ್ಪ ಹೆಚ್ಚಾದುದು ಎಂಬ ವಿಶೇಷಣಕ್ಕೆ ವಿಶೇಷ್ಯವಾದುದು ಅಧ್ಯರ್ಧಬೋಧಿತವಾದ ವಜ್ರಲೇಪ. ಆದುದರಿಂದ ಅಳತೆ $64 \div 2 + 10 = 42$ ಲಕ್ಷಯೋಜನ).

| | | |
|---|---|---|
| ಸಪ್ತದ್ವೀಪ ಸಪ್ತ ಸಾಗರಯುಕ್ತ ಭೂಮಂಡಲ | | 5.07 ಕೋಟಿ |
| ಸ್ವರ್ಣಭೂಮಿ, ಎರಡೂ ಕಡೆಯಿಂದ | ——— | 0.64 ಲಕ್ಷ<br>0.64 ಲಕ್ಷ |
| ವಜ್ರಭೂಮಿ, ಎರಡೂ ಕಡೆಯಿಂದ | ——— | 0.42 ಲಕ್ಷ<br>0.42 ಲಕ್ಷ |
| | | 7.19 ಲಕ್ಷ |

ಭೂಭಾಗ ಒಟ್ಟು ಅಳತೆ – 7 ಕೋಟಿ 14 ಲಕ್ಷ (19–14 = 5) ಉಳಿದ ಈ 5 ಲಕ್ಷ ಲೋಕಾಲೋಕಪರ್ವತದ ಸಾನುಪ್ರದೇಶವೆಂದು ಭಾವಿಸಬೇಕು.

ಪಂಚಾಶತ್ಕೋಟಿ ಸಂಖ್ಯಾಯೂಂ ನಚೇದ್ಭಂಗೋ ಭವೇದಿಹ ।
ಅರ್ಧಾಧಿಕಂ ಪೂರ್ವಲಕ್ಷ ಪ್ರಮಾಣಮಿತಿ ಚೋಪರಿ ॥೭೦॥

ಅಧ್ಯರ್ಧಶಬ್ದಸ್ಯಾರ್ಥ : ಸ್ಯಾದ್ಯದ್ವಾಗ್ಯೋಗ್ಯಾರ್ಥವಾದಿನೀ ।
ಚತುಷ್ಷಷ್ಟಿದ್ವಯಮಿತಾದ್ಯದಂತ್ಯದ್ವೀಪತೋಧಿಕಂ ॥೭೧॥

ಅರ್ಧಂತದ್ವೀಪ ಮಾನಂಚ ಸ್ವರ್ಣಭೂಮೇರುದೀರಿತಾ।
ಹ್ಯುತ್ತರಾಲಕ್ಷನವತಿಃ ಕೋಟಿಶ್ಚೈಕಾ ತದಾಭವೇತ್ ॥೭೨॥

ಈಗ ಹೇಳಿದಂತೆ ಎಣಿಕೆಮಾಡದಿದ್ದರೆ ಬ್ರಹ್ಮಾಂಡದ ಒಳ ಅಳತೆ 50 ಕೋಟಿ ಎಂಬ ವಾಕ್ಯವನ್ನು ಕೆಡಿಸಿದಂತಾಗುವುದು. ಪದಗಳನ್ನು ಸರಿಯಾಗಿ ಹೊಂದಿಸಿ ಅರ್ಥಮಾಡದಿದ್ದರೆ ಸ್ವರ್ಣಭೂಮಿಯ ಅಳತೆ 96 ಲಕ್ಷವೆಂತಲೂ, ವಜ್ರಲೇಪದ ಅಳತೆ 48 ಲಕ್ಷ ಎಂತಲೂ ಆಗಿ, ಒಟ್ಟು ಭೂಭಾಗದ ಅಳತೆ $5.07+0.96+0.96+0.48+0.48=7.95$ ಅಥವ 8 ಕೋಟಿ ಎಂದಂತಾಗುವುದು.

ಕೋಟ್ಯಷ್ಟಕೇನ ಸಹಿತಾ ಸ್ಯಾದೇವಂ ಸತಿಭೂರಿಯಂ ।
ತಮಃ ಷೋಡಶಕೋಟಿಸ್ಸ್ಯಾದ್ದ್ವಾತ್ರಿಂಶತ್ಕೋಟಿ ಸಂಯುತಂ ॥೭೩॥

ಘನೋದಕಂಚೈವ ಮಾಸನ್ ಪಂಚಾಶತ್ಕೋಟಿತೋಧಿಕಾ ।
ಷಟ್ಕೋಟಯಃ ಕುತಸ್ತಾಸ್ಯುಃ ತದ್ವಾಕ್ಯಂ ನೈತದರ್ಥಕಂ ॥೭೪॥

ಕಿಂತೂಕ್ತ ಏವ ಸಂಪೂರ್ಣ ಮತೇಗರ್ಥೋವಮತೋಂಜಸಾಂ ।
ವ್ಯ ದಿವ್ರೀಹ್ಯರ್ಥ ಸಿದ್ಧಾರ್ಥ ಪ್ರಮಾಣಂ ನಸ್ಥಿರೀಭವತ್ ॥೭೫॥

ಇತಿಮತ್ವಾವಜ್ರಲೇಪೇ ನಿರ್ಮಮೇತಿದ್ವಢಿಮ್ನಿ ತತ್ ।
ಗ್ರಂಥಬಾಹುಳ್ಯ ಭೀತ್ಯೇದಂ ಸ್ಪಷ್ಟಂ ನಾಚಷ್ಟಸರ್ವವಿತ್ ॥೭೬॥

ಅಧಿಕಾರ್ಥೋಪಸರ್ಗೋಕ್ತ್ಯಾ ಸಂಜ್ಞಯಾಜ್ಞಾಪಯತ್ಪ್ರಭುಃ ।
ಸ್ವಸೇವಕಜನಖ್ಯಾತ್ಯೈ ನಿತ್ಯಂಮಮ ಹೃದಂಬುಜೇ ॥೭೭॥
ಕೃತಧಾಮಾ ಮಧ್ವನಾಮಾ ಸ್ಪಷ್ಟಯಾಮಾಸ ತುಷ್ಟಧೀಃ ।

ಭೂಭಾಗದ ಅಳತೆ ಎಂಟುಕೋಟಿ ಯೋಜನ ಎನ್ನುವುದಾದರೆ, ತಮೋಭಾಗ ಹದಿನಾರು ಕೋಟಿಯಾಗಬೇಕು; ಘನೋದಕ ಭಾಗ ಮೂವತ್ತೆರಡು ಕೋಟಿಯಾಗಬೇಕು; ಹೀಗೆ ಮೂರರ ಒಟ್ಟು ಅಳತೆ $(8+16+32)$ ಐವತ್ತಾರು ಕೋಟಿ ಯೋಜನವಾಗಬೇಕಾದೀತು. ಅದು ಐವತ್ತು ಕೋಟಿಯನ್ನು ಮೀರಿದ ಅಳತೆಯಾಗುವುದು. ಆರು ಕೋಟಿ ಹೆಚ್ಚಿನ ಅಳತೆಗೆ ಅವಕಾಶವೆಲ್ಲಿದೆ? ಆದುದರಿಂದ ಅದು ಅವರ ಮಾತಿನ ಅರ್ಥವಲ್ಲ. ನಾವು ಹೇಳಿದ 64, 42 ಎಂಬ ಅರ್ಥವೇ ಪೂರ್ಣಪ್ರಜ್ಞರಿಗೆ ಸಮ್ಮತವಾದುದು. ಲೆಕ್ಕಾಚಾರವು ಎಷ್ಟು ನಿಖರವಾಗಿದೆ ಎಂದರೆ, ಭೂಮಿಯ ಅಂಚು ಮಣ್ಣಿನಿಂದ ಕೂಡಿದುದಾದರೆ ಅದು ಕೊರೆತದಿಂದ ಅಥವ ಚದುರುವಿಕೆಯಿಂದ ಅಳತೆಯಲ್ಲಿ ಹೆಚ್ಚು ಕಡಿಮೆಯಾದೀತೆಂಬ ಅರಿವುಳ್ಳ ಪರಮಾತ್ಮನು ಅತಿ

ಕಠಿನವಾದ ವಜ್ರಲೇಪವನ್ನು ಭೂಭಾಗದ ಹೊರಅಂಚಿನಲ್ಲಿ ನಿರ್ಮಿಸಿದ್ದಾನೆ. ಇದನ್ನೆಲ್ಲಾ ಸರ್ವಜ್ಞಾಚಾರ್ಯರು ಅರಿಯದವರಲ್ಲ. ಗ್ರಂಥ ವಿಸಾರವಾಗಕೂಡದೆಂದು ಸೂಕ್ಷ್ಮವಾಗಿ ತಿಳಿಸಿದ್ದಾರೆ, ಅಧ್ಯರ್ಧ ಎಂಬ ಮಾತಿನಿಂದ ಸೂಚಿಸಿದ್ದಾರೆ. ಸದಾ ನನ್ನ ಹೃದಯ ಮಂದಿರವಾಸಿಯಾದ ಅವರು, ತಮ್ಮವನಾದ ನನಗೆ ಕೀರ್ತಿಯನ್ನು ಕೊಡಿಸುವುದಕ್ಕೋಸ್ಕರ ಹೀಗೆ ಸೂಚಿಸಿ ಕೈಬಿಟ್ಟಿದ್ದಾರೆ; ನನ್ನ ಕಡೆಯಿಂದ ಅರ್ಥವನ್ನು ಬಿಡಿಸಿ ಹೇಳಿಸಿದ್ದಾರೆ.

**ತಮೋಭಾಗ :**

ಯಾವುದನ್ನು ಭೂಭಾಗವೆಂದು ಹೇಳಿತೋ ಅದು ಒಂದು ಲಕ್ಷ ಯೋಜನ ಮಂದವಾದ ಗಟ್ಟಿವಸ್ತುಗಳಿಂದಾಗಿರುವುದು. ಅಂಧಂತಮಸ್ಸು ಎಂಬುದು ಭೂಭಾಗದಿಂದ ಹೊರಗೆ ಘನೋದಕದಲ್ಲಿ ಕುಗ್ಗಿದ ಪ್ರದೇಶವಾಗಿರುವುದು. ಅದು ಭೂಮಿಯ ಅಂಚಿಗಿಂತ ಕೆಳಗಿನ ಮಟ್ಟದಲ್ಲಿರುವುದು. ಭೂಮಂಡಲದ ಸುತ್ತಲೂ ಅದು ಭೂಮಂಡಲದ ಮಟ್ಟಕ್ಕಿಂತ ಕೆಳಗಿರುವುದು. ಅದರಿಂದಲೇ ಅದನ್ನು ಅಧೋಗತಿ ಎಂದು ಹೇಳುತ್ತಾರೆ. ಅದು ಹಾಗೆ ಕೆಳಗಿರದಿದ್ದ ಪಕ್ಷದಲ್ಲಿ ನರಕದಿಂದ ಕೆಳಗಿಳಿಯುವುದು ಮತ್ತು ಅಲ್ಲಿಂದ ಮೇಲಕ್ಕೆ ಬರುವುದು ಎಂಬ ಮಾತು ಹೇಗೆ ಸಂಗತವಾಗುತ್ತಿತ್ತು? ಈ ರೀತಿ ಕೆಳಗಿಳಿಯುವುದು ಮತ್ತು ಪುನಃ ಮೇಲಕ್ಕೆ ಬರುವುದು ಎಂಬ ಅಂಶವನ್ನು ಶ್ರೀ ವೇದವ್ಯಾಸಕೃತ ಬ್ರಹ್ಮಸೂತ್ರದಲ್ಲಿ ನೋಡಬಹುದು.

(ಈಗ ಹೇಳಿದ ಅಂಧಂತಮಸ್ಸು ಎಂಬುದು ಅತ್ಯಂತ ಆಳವಾದುದು. ಸಾಮಾನ್ಯ ನರಕಗಳಲ್ಲಿ ಅನುಭವಿಸಬೇಕಾದುದಕ್ಕಿಂತ ಹೆಚ್ಚು ಶಿಕ್ಷೆಗೆ ಅರ್ಹರಾದವರು ತಮಸ್ಸಿನ ಹಳ್ಳದಲ್ಲಿ ಒಂದು ಹಂತದವರೆಗೆ ನೂಕಲ್ಪಡುವರು. ಅಲ್ಲಿ ಶಿಕ್ಷೆ ಮುಗಿದ ನಂತರ ಮತ್ತೆ ಮೇಲಕ್ಕೆ ಕರೆತರಲ್ಪಡುವರು. ಆ ಹಂತಕ್ಕಿಂತಲೂ ಕೆಳಗಿರುವ ತಮಸ್ಸು, ಮಹಾತಮಸ್ಸು ಮತ್ತು ಅಂಧಂತಮಸ್ಸು ಎಂಬ ಕೆಳಕೆಳಗಿನ ಭಾಗಗಳಲ್ಲಿ ಬಿದ್ದವರು ಮತ್ತೆ ಮೇಲಕ್ಕೆ ಬರುವ ಪ್ರಸಂಗವೇ ಇಲ್ಲ. ಅವರು ತಮ್ಮ ಕೇಡಿಗ ಸ್ವಭಾವವನ್ನೇ ಪರಿಪೂರ್ಣ ಗೊಳಿಸಿಕೊಂಡು ನಿತ್ಯ ನರಕ ಭಾಗಿಗಳಾಗುವ ಮೂರನೇ ಗುಂಪಿನ ಜೀವರು. ಅವರು "ಮೂಢಾಃ, ಜನ್ಮನಿ ಜನ್ಮನಿ ಮಾಮ್ ಅಪ್ರಾಪ್ಯೈವ, ತತಃ ಅಧಮಾಂಗತಿಂ ಯಾನ್ತಿ" ಎಂದು ಭಗವದ್ಗೀತೆಯಲ್ಲಿ ನಿರ್ದೇಶಿಸಲ್ಪಟ್ಟವರು).

ಊರ್ಧ್ವಂ ಲೋಕಾಲೋಕಗಿರೇರಪ್ಯಸ್ತ್ಯಂಧ್ರಂಕಷಂ ಹಿತತ್ ।
ಶಿಲೀಭೂತ ತಮೋರೂಪಂ ಹಿಮಾನೀವಶಿಲಾತ್ಮಿಕಾ ॥೮೧॥

ನಚೇದ್ಭ್ವಾರಂ ಕುತಶ್ಚಕ್ರೇ ಚಕ್ರೇಣ ಯದುಪುಂಗವಃ ।
ಅನಾದಿ ಕಾಲತಃ ಪ್ರಾಪ್ತಾ ಕಲ್ಯಾದ್ಯಾಸ್ತತ್ರದಾನವಾಃ ॥೮೨॥

ಅಸಂಖ್ಯಾತಾಃ ಕಿಲಾಶ್ನಂತಿ ಯಾತನಾಸ್ತ್ರೀವ್ರವೇದನಾಃ ।
ಲಯೇಽಪಿ ಮುಕ್ತಿವದಿದಂ ವಿಷ್ವಕ್ತಿಷ್ಠತ್ಯನಶ್ವರಂ ॥೮೩॥

ತದ್ಭಾಗಜೀವಾ ಏವ ತದಾ ವಿಶಂತಿ ಜಠರಂ ಹರೇಃ ।
ತತ್ರಾಪಿದುಃಖ ರೂಪತ್ವಾದ್ವದಕ್ಷಿಕುಕ್ಷಿ ಶಿರೋವ್ಯಥಾಃ ॥೮೪॥

ಆಧಿವ್ಯಾಧೀಂಶ್ಚಬಹುಶೋಭುಂಜಂತೇಸ್ವಶರೀರಗಾನ್ ।
ಹರ್ಯಾಜ್ಞಯಾ ಸೃಷ್ಟಿಕಾಲೇ ಪತಂತ್ಯತ್ರಕಿಲಾಖಿಲಾಃ ॥೮೫॥

ಅಗ್ನಿಶಸ್ತ್ರ ಶಿಲಾಕ್ಷ್ವೇಯ ರೂಕ್ಷಪಕ್ಷಿ ಕೃತವ್ಯಥಾಃ ।
ವಿಣ್ಮೂತ್ರಪೂಯಕಲಿಲ ತಮಃ ಕೂಪೇಷ್ವನೇಕಧಾ ॥೮೬॥

ನಾನಾ ವಿಧಾ ಯಾತನಾಶ್ಚ ಪುನರ್ಭೋಕ್ತುಂಹಿ ಪೂರ್ವವತ್ ।
ಯದ್ಯಪ್ಯಂಧೇ ತಮಸ್ಯಸ್ಮಿನ್ ಪತಿತಾಃಪಾಪಿನೋಜನಾಃ ॥೮೭॥

ನಿತ್ಯದುಃಖಾತ್ಮಕಾ ಮಿಥ್ಯಾಜ್ಞಾನಮಾತ್ರಸ್ವರೂಪಿಣಃ ।
ಅಚ್ಛೇದ್ಯಾಭೇದ್ಯದೇಹತ್ವಾತ್ತಥಾಪ್ಯಸ್ತ್ರಾದಿ ಪಾತನೈಃ ॥೮೮॥

ವಜ್ರಕಲ್ಪ ಜಲೂಕಾದಿರದನೈಃ ಪಾವಕೋಷ್ಮಣಾ ।
ಶಿಲಾಪಾತೈಃ ಪೂಯಮೂತ್ರ ದುಲದುರ್ಗಂಧತೋಪಿಚ ॥೮೯॥

ರುದತಾಂ ಕ್ರೂರಶಬ್ದೈಲಶ್ಚ ತಿಕ್ತಾತ್ಯುಷ್ಣರಸಾದಿನಾ ।
ವಕ್ತ್ರನೇತ್ರಶ್ರೋತ್ರನಾಸಾ ಗಾತ್ರೇಷುಚಪುನಃ ಪುನಃ ॥೯೦॥

ವ್ಯಕ್ತೀಭವಂತಿ ನಿತ್ಯಾನಿ ದುಃಖಾನ್ಯೇವ ಕ್ಷಣೇ ಕ್ಷಣೇ ।
ಮುಕ್ತಾನಾಂ ಮೌಕ್ತವಿಷಯೈರ್ವ್ಯಕ್ತಾನೇಕ ಪ್ರಮೋದವತ್ ॥೯೧॥

ತತ್ಪಂಚಕಷ್ಟಮಿತ್ಯಾಹುರ್ಯತ್ಪಂಚೇಂದ್ರಿಯದುಃಖದಂ ।
ರುದತಾಂ ಕ್ರೂರಶಬ್ದೈಲಶ್ಚ ಕ್ರೂರಶಸ್ತ್ರಾದಿದರ್ಶನೈಃ ॥೯೨॥
ಕ್ರೂರಗಂಧೈಃ ಕ್ರೂರರಸೈಃ ಕ್ರೂರಾಸ್ತ್ರಸ್ಪರ್ಶನೈರಪಿ ।

ತಮಸ್ಸು ಎಂಬ ಕತ್ತಲೆಯ ವಸ್ತು, ತಮಸ್ಸಿನ ಮೇಲೆ, ಲೋಕಾ ಲೋಕ ಪರ್ವತವನ್ನೂ ಮೀರಿದಷ್ಟು ಎತ್ತರದವರಗೆ ಹಬ್ಬಿನಿಂತಿದೆ. ನೀರು ಮಂಜುಗಡ್ಡೆ

ಯಾವಂತೆ ಹೆಪ್ಪುಗಟ್ಟಿದ ಕತ್ತಲೆಯು ಶಿಲೆಯಂತೆ ಗಟ್ಟಿಯಾಗಿದೆ. ಹಾಗಿಲ್ಲದ ಪಕ್ಷದಲ್ಲಿ, ಯದುಕುಲಪುಂಗವನಾದ ಶ್ರೀಕೃಷ್ಣನು ಅದನ್ನು ಭೇದಿಸಲು ತನ್ನ ಚಕ್ರಾಯುಧವನ್ನೇಕೆ ಉಪಯೋಗಿಸಬೇಕಾಗುತ್ತಿತ್ತು ? ಆ ತಮಸ್ಸಿನ ಹಳ್ಳದಲ್ಲಿ ಅನಾದಿ ಬ್ರಹ್ಮ ಕಲ್ಪಗಳಿಂದಲೂ ಸಾಧನೆ ಪೂರ್ತಿ ಮಾಡಿಕೊಂಡು ಬಂದ ಅಸಂಖ್ಯಾತ ಕಲ್ಯಾದಿ ದಾನವರು ಬಹು ನೋವನ್ನುಂಟುಮಾಡುವ ಹಿಂಸೆಗಳನ್ನು ಅನುಭವಿಸುತ್ತಾ ಬಿದ್ದಿರುವರು. ಮಹಾಪ್ರಳಯದಲ್ಲಿ ಪ್ರಳಯಾಗ್ನಿ ಮೊದಲಾದವುಗಳಿಂದ ನಾಶ ಹೊಂದದ ವೈಕುಂಠವು ಹೇಗೆ ರೂಪಾಂತರ ಹೊಂದಿ ಅಲ್ಲಿಯೇ ಇರುವುದೋ ಅದರಂತೆ ಈ ತಮಸ್ಸಿನ ಹಳ್ಳವೂ ಕೂಡ ನಾಶವಾಗದೆ ಇದ್ದಲ್ಲಿಯೇ ಇರುವುದು. ಅಲ್ಲಿದ್ದ ಆ ಜೀವರೆಲ್ಲಾ ಪ್ರಳಯ ಕಾಲದಲ್ಲಿ ಶ್ರೀ ಹರಿಯ ಉದರ ಪ್ರದೇಶದಲ್ಲಿ ಹುದುಗಿಸಲ್ಪಟ್ಟಿರುವರು. ಅಲ್ಲಿದ್ದಾಗಲೂ ಕೂಡ ದುಃಖ ಸ್ವರೂಪಿಗಳೇ ಆದ ಆ ಜೀವರು, ತಮ್ಮ ಸ್ವರೂಪ ಶರೀರಗಳಲ್ಲಿಯೇ ಉತ್ಪನ್ನವಾಗುವ ದೈಹಿಕ ಮಾನಸಿಕ ರೋಗ ರುಜಿನಗಳಾದ ಕಣ್ಣುನೋವು, ಹೊಟ್ಟೆ ನೋವು, ತಲೆನೋವು ಮುಂತಾ ದವುಗಳಿಂದ ನರಳುತ್ತಿರುತ್ತಾರೆ. ಮತ್ತೆ ಸೃಷ್ಟಿಕಾಲವು ಬಂದಾಗ ಇವರೆಲ್ಲಾ ಪುನಃ ತಮಸ್ಸಿನ ಹಳ್ಳದಲ್ಲಿ ತಳ್ಳಲ್ಪಡುತ್ತಾರೆ; ಇದು ಶ್ರೀ ಹರಿಯ ಆಜ್ಞಾನುಸಾರ. ಆ ಕಾಲದಲ್ಲಿ, ಅಗ್ನಿವೃಷ್ಟಿ ಶಿಲಾಪಾತ, ಕ್ರೂರಪಕ್ಷಿಗಳ ಮೊನಚಾದ ಕೊಕ್ಕುಗಳಿಂದ ಚುಚ್ಚುವಿಕೆ ಮೊದಲಾದ ಯಾತನೆಗಳನ್ನು ಅನುಭವಿಸುವುದಲ್ಲದೆ ಅವರು ಮಲ ಮೂತ್ರ ರಕ್ತಗಳ ಮಡುಗಳಲ್ಲಿ ಹೊರಳಾಡಿ ದುಃಖಿಸುತ್ತಾರೆ. ಹಿಂದಿನ ಕಲ್ಪಗಳಲ್ಲಿ ನಡೆದಂತೆಯೇ ಇದು ಪ್ರತಿಕಲ್ಪದಲ್ಲಿಯೂ ನಡೆಯುತ್ತದೆ.

ಈ ಪಾಪಿಷ್ಠಸ್ವರೂಪ ಜೀವಿಗಳು ಅಂಧಂತಮಸ್ಸಿನಲ್ಲಿ ಹೀಗೆ ಹಿಂಸೆಗಳಿಗೆ ಒಳಗಾದರೂ, ಜೀವ ಸ್ವರೂಪವೆಂಬುದು ಅಚ್ಛೇದ್ಯವೂ ಅಭೇದ್ಯವೂ ಆದುದರಿಂದ, ಅಸ್ತ್ರಶಸ್ತ್ರಗಳಿಂದ ಘಾತಿಸಲ್ಪಟ್ಟರೂ ನಾಶಹೊಂದುವುದಿಲ್ಲ. ಅವರ ಸ್ವರೂಪವೆಂಬುದು ಮಿಥ್ಯಾಜ್ಞಾನಾತ್ಮಕವಾದುದು; ದುಃಖರೂಪವೇ ಆದುದು. ವಜ್ರಕಠಿಣಗಳಾದ ಜಿಗಳೆಗಳು ಹಿಡಿದು ಪೀಡಿಸಿದರೂ, ಬೆಂಕಿಯ ಕಾವು ದಹಿಸಿದರೂ, ಕಲ್ಲುಬಂಡೆಗಳು ಮೈಮೇಲೆ ಬಿದ್ದರೂ, ಮಲ ಮೂತ್ರ ರಕ್ತಗಳ ದುರ್ಗಂಧವು ಬಾಧಿಸಿದರೂ, ದುಃಖಿತರಾಗಿ ಅಳುವವರ ಧ್ವನಿಗಳು ಕಿವಿಗಳನ್ನು ಕೊರೆದರೂ, ಕಹಿಯಾದ ಮತ್ತು ಅತಿಬಿಸಿಯಾದ ರಸಗಳು ನಾಲಗೆಗಳನ್ನು ಹಿಂಸಿಸಿದರೂ, ಹೀಗೆ ಬಾಯಿ, ಕಣ್ಣು, ಕಿವಿ, ಮೂಗು ಮತ್ತು ಸ್ವರೂಪಚರ್ಮವು ನೊಂದರೂ, ಅವರು ತಪ್ಪಿಸಿಕೊಳ್ಳ

ಲಾರರು. ಕ್ಷಣಕ್ಷಣಕ್ಕೂ ಸ್ವರೂಪ ಸಹಜವಾದ ಇಂತಹ ದುಃಖಗಳನ್ನೇ ಅವರು ಅನುಭವಿಸುವರು. ಮುಕ್ತಿಯೋಗ್ಯಜೀವರು ವೈಕುಂಠಾದಿ ಧಾಮತ್ರಯಗಳಲ್ಲಿ ಹೇಗೆ ನಿತ್ಯಸುಖಭಾಗಿಗಳೋ ಹಾಗೆ, ತಮೋಯೋಗ್ಯ ಜೀವರು ನಿತ್ಯದುಃಖಾನುಭವಿಗಳು. ಹೀಗೆ, ಪಂಚೇಂದ್ರಿಯಗಳಿಗೆ ಹಿಂಸೆಯಾಗುವುದರಿಂದ ಅವರ ಸ್ಥಿತಿಯು ಪಂಚಕಷ್ಟ ವೆಂದು ವರ್ಣಿಸಲ್ಪಡುವುದು. ಆಕ್ರಂದನ ಶಬ್ದಶ್ರವಣ, ಕ್ರೂರ ಶಸ್ತ್ರಾದಿಗಳ ದರ್ಶನ, ದುರ್ಗಂಧದ ಅನುಭವ, ಉಷ್ಣರಸಗಳಿಂದ ಹಿಂಸೆ, ಅಸ್ತ್ರಶಸ್ತ್ರಗಳ ಘಾತ — ಇವು ಪಂಚೇಂದ್ರಿಯಗಳಿಗೆ ನೋವನ್ನು ಕೊಡತಕ್ಕವುಗಳು.

[ ತಮಸ್ಸಿನ ಶಿಲೆಯನ್ನು ಶ್ರೀ ಕೃಷ್ಣನ ಚಕ್ರವು ಛೇದಿಸಿದ ಕ್ರಮ ಹೇಗೆ ಎಂಬುದನ್ನು ಅರಿತಿರಬೇಕು. ಆ ಚಕ್ರವು, "ಸುದರ್ಶನ ಮಹಾಜ್ವಾಲಾ ಕೋಟಿ ಸೂರ್ಯ ಸಮಪ್ರಭಾ" ಎಂದು ವರ್ಣಿತವಾಗಿದೆ. ಆದುದರಿಂದ, ಕತ್ತಲೆಯನ್ನು ಬೆಳಕು ಛೇದಿಸಿದಂತೆ, ಶ್ರೀ ಕೃಷ್ಣನ ಸುದರ್ಶನ ಚಕ್ರವು ತನ್ನ ಬೆಳಕಿನ ಪ್ರಭಾವದಿಂದ ಕತ್ತಲೆಯನ್ನೋಡಿಸಿ ಬೆಳಕಿನಿಂದ ಲೋಕಾಲೋಕ ಪರ್ವತದಲ್ಲಿ ಸುರಂಗ ಮಾರ್ಗವನ್ನು ಏರ್ಪಡಿಸಿತು. ಅದರ ಮೂಲಕ ಅರ್ಜುನನ ರಥವನ್ನು ಓಡಿಸಿ, ಘನೋದಕದ ಉತ್ತರದಂಚಿನಲ್ಲಿರುವ ಅನಂತಾಸನವೆಂಬ ಹರಿಯ ಲೋಕಕ್ಕೆ ಅರ್ಜುನನನ್ನು ಶ್ರೀ ಕೃಷ್ಣನು ಕರೆದೊಯ್ದನು ; ಮತ್ತು ಮೃತನಾದ ಮೇಲೆ ಅಲ್ಲಿದ್ದ ಗುರುಪುತ್ರ ಜೀವನಿಗೆ ಮತ್ತೆ ದೇಹದಾನ ಮಾಡಿ ಹಿಂದಕ್ಕೆ ಕರೆತಂದನು.

ತಮಸ್ಸಿನಲ್ಲಿ ದುಃಖಸ್ವರೂಪರಾದ ಜೀವರು ಹಿಂಸೆಪಡುವುದನ್ನು ಇಷ್ಟು ವಿಸ್ತಾರವಾಗಿ ವರ್ಣಿಸಲು ಕಾರಣವೇನು ಎಂದು ಆಧುನಿಕರು ಆಕ್ಷೇಪಿಸಬಹುದು. ಅದರ ಮರ್ಮವನ್ನರಿಯಬೇಕಾದರೆ, ತತ್ವಜ್ಞಾನದ ತುದಿಯಂಚನ್ನು ಮುಟ್ಟಿ ವಿಚಾರಿಸಬೇಕು. ಜಡದೇಹಧಾರಿಗಳಾಗಿರುವ ಜೀವರಿಗೆ, ನಿಜವಾಗಿ ತಾವುಯಾರು, ತಮ್ಮ ಸ್ವಭಾವ ಎಂತಹುದು ಎಂಬ ತಿಳಿವಳಿಕೆಯೇ ಇಲ್ಲದಿರುವಾಗ ನಿಜಾರ್ಥವನ್ನು ಗ್ರಹಿಸುವುದು ಬಹಳ ಕಷ್ಟ. ಜಡವಲ್ಲದ ಜೀವ ಸ್ವರೂಪವು ತಿಳಿವಳಿಕೆಯುಳ್ಳ ವಸ್ತು. ಆ ತಿಳಿವಳಿಕೆ ಸ್ವಚ್ಛವಾಗಿರಬಹುದು, ಮಿಶ್ರವಾಗಿರಬಹುದು, ತಪ್ಪು ತಿಳಿವಳಿಕೆಯೇ ಆಗಿರಬಹುದು. ಸ್ವಚ್ಛವಾದ ಜ್ಞಾನವೇ ಸ್ವರೂಪವಾಗಿ ಉಳ್ಳ ಜೀವರು ಸ್ವಭಾವತಃ ಆನಂದಮಯರು ; ಮಿಶ್ರಜ್ಞಾನದವರು ಸುಖದುಃಖಾತ್ಮಕರು ; ಅಜ್ಞಾನಿಗಳು ಅಥವ ಮಿಥ್ಯಾಜ್ಞಾನಿಗಳು ದುಃಖ ಸ್ವಭಾವದವರು.

ಸರ್ವಸಮರ್ಥನಾದ ಭಗವಂತನು ಈ ಸ್ವಭಾವಗಳನ್ನೇ ಏಕೆ ಬದಲಾಯಿಸು ಬಾರದು ಎಂದು ಕೇಳುವುದು ಹುಚ್ಚುಪ್ರಶ್ನೆಯೇ ಸರಿ. ಅವರಾಗಿ ಇಚ್ಛಿಸದೆ, ಅವಕಾಶ ನೀಡಿದರೂ ತಿದ್ದಿಕೊಳ್ಳದೆ, ಮುಕ್ತಿಸುಖವಿತ್ತರೂ ಬೇಡವೆಂದು ತಿರಸ್ಕರಿಸುವ ಜೀವರ ಸ್ವಭಾವವನ್ನು ದೇವರು ವ್ಯತ್ಯಾಸಗೊಳಿಸಿದರೆ ಅದು ಅನ್ಯಾಯವೇ ಹೊರತು ನ್ಯಾಯವಲ್ಲ. ಅದುದರಿಂದ ದೇವರು ಜೀವ ಸ್ವಭಾವಗಳನ್ನು ಬದಲಾಯಿಸುವುದಿಲ್ಲ ಎಂದು ನಾವು ಸಮಾಧಾನ ಹೊಂದಬೇಕು.

ಮಾವಿನ ಮರಕ್ಕೆ ಬೇಕಾಗುವ ಗೊಬ್ಬರದ ಲವಣಾಂಶಗಳೇ ಬೇರೆ; ಬೇವಿನ ಮರಕ್ಕೆ ಬೇಕಾಗುವ ಅಂಶಗಳೇ ಬೇರೆ; ಜಾಲಿಯದಕ್ಕೂ ಬೇರೆಯೇ.

ಮುಕ್ತಿ ಯೋಗ್ಯಜೀವರು ಸಂಸಾರಾವಸ್ಥೆಯಲ್ಲಿ ಬಹುವಾಗಿ ದುರ್ಜೀವರ ಪ್ರಭಾವಕ್ಕೆ ಒಳಗಾಗಿರುತ್ತಾರೆ. ನರಕದ ವರ್ಣನೆ, ಅಂಧಂತಮಸ್ಸಿನ ವರ್ಣನೆಗಳನ್ನು ಕೇಳಿ ತಿಳಿದಲ್ಲದೆ ಅವರು ಸುಲಭವಾಗಿ ಸನ್ಮಾರ್ಗ ಹಿಡಿಯುವುದಿಲ್ಲ. ಆದುದರಿಂದ ತಮಸ್ಸಿನ ದುಃಖಾನುಭವದ ವರ್ಣನೆಯು ಅಗತ್ಯವೇ ಸರಿ.

## ಪಾತಾಳಾದಿ ಅಧೋಲೋಕಗಳು

ಭೂಮೇರಂತಸ್ಸಪ್ತ ಲೋಕಾಃ ಸಂತಿಭೂಗರ್ತವತ್ಕ್ರಮಾತ್ ॥೯೩॥
ಅತಳಂ ವಿತಳಂಚೈವ ಸುತಳಂಚತಳಾತಳಂ ।
ಮಹಾತಳಂ ಪಂಚಮಂಸ್ಯಾದ್ರಸಾತಳಮತಃಪರಂ ॥೯೪॥
ಪಾತಾಳಂ ಸಪ್ತಮಂ ತೇಷಾಮಯುತಯೋಜನತೋಽಖಿಲಾಃ ।
ಉಚ್ಛ್ರಿತಾ ವಿಸ್ತೃತಾಶ್ಚೈವ ಯಥಾಯೋಗಂ ಭುವೋಂತರೇ ॥೯೫॥
ಏವಂಸಪ್ತತಿ ಸಾಹಸ್ರ ಯೋಜನೇಷು ಗತೇಷ್ವಧಃ ।
ಭೂರೇವ ಬಹು ಸಾಹಸ್ರ ಯೋಜನಾಸ್ತೇಶಿಲಾಮಯೀ ॥೯೬॥
ಊರ್ಧ್ವಂಷೋಡಶ ಸಾಹಸ್ರೇ ಗತೇಮೇರೋರ್ನಿಖಾತನಾತ್ ।
ಲೋಕಸಂಧಿಷು ಷಟ್ಸ್ವೇವಂ ಸಹಸ್ರಾರ್ಧಸ್ಯ ಸಂಖ್ಯಯಾ ॥೯೭॥
ತ್ರಿಸಹಸ್ರ್ಯಂ ಗತಾಯಾಂಚ ಪುನರೇಕಾದಶೈವತು ।
ಯೋಜನಾನಾಂ ಸಹಸ್ರಾಣಿಸ್ಯುರಧೋಭಾಗವಿಸ್ತೃತೇಃ ॥೯೮॥
ಶೇಷಃಪಾತಾಳ ಲೋಕೇಸ್ಮಿನ್ ಸೇವಿತಃ ಸರ್ವಪನ್ನಗೈಃ ।

ತಿಷ್ಠತ್ಯಮರರೂಪೇಣ ಘನೋದಾಖ್ಯೇಮಹಾರ್ಣವೇ ॥೯೯॥
ಪುಚ್ಛೇನ ವಾಯುಕೂರ್ಮಸ್ಯ ಪೃಷ್ಠಮಾಲಂಬ್ಯ ಶಕ್ತಿಮಾನ್ ।
ಉನ್ನಮ್ಯ ಸ್ವಫಣಾಮೇಕಾಂ ದಿಗ್ಗಜೈಃ ಸಹ ಸರ್ವತಃ ॥೧೦೦॥
ಜಲೋಪರಿಮೇಹೀಮೇತಾಂ ಯಥಾಂಬುನಿ ನಮಜ್ಜತಿ ।
ತಥಾ ಧಾರಯತಿ ಶ್ರೀಮಾನ್ಸರ್ವಲೋಕ ಧುರಂಧರಃ ॥೧೦೧॥
ಸಂಕರ್ಷಣಾಖ್ಯಹರಿಣಾ ಹೃದಿಸ್ಥೇನ ಸಮೇಧಿತಃ ।
ನವಾಧಿಕಾಯಾಂ ನವತೌ ಯೋಜನಾನಾಂ ಸಹಸ್ರಕೇ ॥೧೦೨॥

ಭೂಮಿಯ ಕೆಳಗೆ ಒಳಭಾಗದಲ್ಲಿ ಭೂ ಕುಹರಗಳಂತೆ, ಅತಳ, ವಿತಳ, ಸುತಳ ತಳಾತಳ, ಮಹಾತಳ, ರಸಾತಳ, ಪಾತಾಳಗಳೆಂಬ ಸಪ್ತಲೋಕಗಳಿವೆ. ಒಂದೊಂದೂ ಹತ್ತು ಸಾವಿರ ಯೋಜನ ಎತ್ತರವಾಗಿಯೂ, ಹತ್ತುಸಾವಿರ ಯೋಜನ ವಿಸ್ತಾರವಾಗಿಯೂ ಇದೆ. ಭೂಮಿಯ ಅಂತರದಲ್ಲಿ ಅವು ತಮ್ಮ ತಮ್ಮ ಪ್ರತ್ಯೇಕ ಸ್ಥಾನ ಮಾನಗಳನ್ನು ಪಡೆದಿವೆ. ಹೀಗೆ, ಏಳು ಲೋಕಗಳ ಎತ್ತರಗಳು ಕೂಡಿ 70 ಸಾವಿರ ಯೋಜನವಾಗಲು, ಇನ್ನೂ ಕೆಳಗೆ ಸಹಸ್ರಾರು ಯೋಜನಗಳವರೆಗೆ ಶಿಲಾಮಯವಾದ ಭೂಭಾಗವು ಇರತಕ್ಕದಾಗಿದೆ. ಭೂಮಿಯ ಒಳಭಾಗದಲ್ಲಿಳಿದಿರುವ ಮೇರು ಪರ್ವತದ ಬುಡಭಾಗದ ಆಳತೆ 16 ಸಾವಿರ ಯೋಜನ. ಏಳು ಅಧೋಲೋಕಗಳ ನಡು ನಡುವೆ ಐನೂರು ಯೋಜನಗಳಂತೆ 3000 ಯೋಜನವನ್ನೂ ಕೂಡಿಸಲಾಗಿ, ಭೂಭಾಗದ ತಳದವರೆಗೆ ಇನ್ನೂ 11000 ಯೋಜನಗಳಾಗುವುವು. 16+70+3+11=100 ಸಾವಿರ (1 ಲಕ್ಷ) [5 ಕೋಟಿ ಯೋಜನ ವಿಸ್ತಾರವಾದ ಭೂಭಾಗವು ಅದರ ಮೇಲ್ಮೈ ಮಟ್ಟದಿಂದ ತಳದವರೆಗೆ ಒಂದು ಲಕ್ಷ ಯೋಜನ ಮಂದವಾಗಿದೆ ಎಂದ ಹಾಗಾಯಿತು.]

ಪಾತಾಳಾದಿ ಲೋಕಗಳ ಎಲ್ಲಾ ಸರ್ಪಜಾತಿಗಳಿಂದಲೂ ಸೇವ್ಯನಾದ ಆದಿಶೇಷನು ಘನೋದಕ ಭಾಗದಲ್ಲಿ 99000 ಯೋಜನದ ಪರ್ಯಂತ ವ್ಯಾಪಿಸಿ, ತನ್ನ ಬಾಲಾಗ್ರದಿಂದ ವಾಯುಕೂರ್ಮನ ಆಶ್ರಯವನ್ನು ಪಡೆದು, ತನ್ನ ಒಂದು ಹೆಡೆಯನ್ನೆತ್ತಿ ಅದರ ಮೇಲೆ ಅಷ್ಟದಿಗ್ಗಜಗಳಿಂದ ಸಹಿತವಾದ ಭೂಭಾರವನ್ನು ಹೊತ್ತು ನಿಂತಿದ್ದಾನೆ. ಆದುದರಿಂದ ಭಾರವಾದ ಭೂಭಾಗವು ಘನೋದಕದಲ್ಲಿ ಕುಸಿಯದೆ, ಇದ್ದಲ್ಲಿ ನಿಂತಿದೆ. ಆದಿಶೇಷನಿಗೆ ಇಷ್ಟೊಂದು ಸಾಮರ್ಥ್ಯವು ಹೇಗೆ

ಬಂದಿತೆಂದರೆ, ಅದು ತನ್ನ ಹೃದಯಸಿವಾಸಿಯಾದ ಸಂಕರ್ಷಣ ರೂಪೀ ಪರಮಾತ್ಮ ನನ್ನು ಆರಾಧಿಸುವುದರಿಂದ. [ಇದುವರೆಗೆ ಹಿಂದೆ ಹೇಳಿದ ವರ್ಣನೆಯಲ್ಲಿ ದಿಗ್ಗ ಜಗಳ ಪ್ರಸಕ್ತಿ ಇಲ್ಲ. ಇಲ್ಲಿ, ದಿಗ್ಗಜಗಳಿಂದ ಸಹಿತವಾದ ಭೂಭಾರವನ್ನು ಆದಿ ಶೇಷನು ಹೊತ್ತಿರುವನೆಂದು ಹೇಳಿರುವುದರಿಂದ, ಭೂಮಿಯ ದಪ್ಪವನ್ನು ಕುರಿತು ಕಡೆಯಲ್ಲಿ ಹೇಳಿದ 11000 ಯೋಜನದ ಪ್ರದೇಶದಲ್ಲಿ ಅಷ್ಟದಿಗ್ಗಜಗಳ ಸ್ಥಾನವೆಂದು ಊಹಿಸಬೇಕು.]

## ನರಕಗಳ ಸ್ಥಾನ

ಭುವೋಧಸ್ತಾತ್ ವಾಮ ಭಾಗೇ ಬಹುಯೋಜನ ವಿಸ್ತೃತಃ ।
ಮಹಾನ್ಗರ್ತಸ್ತತ್ಸಮೀಪೇ ಪುರೀ ಸಂಯಮನೀ ಕಿಲ ॥೧೦೩॥
ತತ್ರೋಗ್ರ ರೂಪೀ ಭಗವಾನ್ ಯಮಸ್ತಿಷ್ಠತಿ ಸರ್ವದಾ ।
ಅತಿಕ್ರೂರಾಯಮಭಟಾಸ್ತತ್ರ ಸಂತಿ ಸಹಸ್ರಶಃ ॥೧೦೪॥
ನದೀವೈತರಣೀ ತತ್ರ ಪಾಪಿನಾಂ ಭಯಕಾರಿಣೀ ।
ತಸ್ಯೋಪಾಂತೇತು ನರಕಾ ರೌರವಾದ್ಯಾ ಭಯಂಕರಾಃ ॥೧೦೫॥
ಪಾಪಿನಾಂ ಶಿಕ್ಷಣಕೃತೇ ಕೃತಾಃಸಂತಿ ಸಹಸ್ರಶಃ ।
ಅಷ್ಟದಿಕ್ಪಾಲ ಪಂಙ್ತೌತು ದಕ್ಷಿಣಸ್ಯಾಂದಿಶಿಕ್ರಮಾತ್ ॥೧೦೬॥
ಯಮಸ್ಯ ನಗರೀತ್ವನ್ಯಾ ಸ್ವರ್ಗೇಪ್ಯಸ್ತಿ ಸುಖಪ್ರದಾ ।

ಭೂಗರ್ಭದಲ್ಲಿ, ದಕ್ಷಿಣ ದಿಕ್ಕಿನಲ್ಲಿ ಬಹುಯೋಜನ ವಿಸ್ತಾರವಾದ ಕಂದಕವಿದೆ. ಅದರ ಸಮೀಪದಲ್ಲಿ ಯಮರಾಯನ ಸಂಯಮನೀ ಪುರವಿದೆ. ಅಲ್ಲಿ ಉಗ್ರರೂಪಿ ಯಾದ ಯಮರಾಯನು ಯಾವಾಗಲೂ ಕಾರ್ಯನಿರತನಾಗಿರುತ್ತಾನೆ. ಅತಿ ಕ್ರೂರಾದ ಸಹಸ್ರಾರು ಮಂದಿ ಯಮಭಟರಿದ್ದಾರೆ. ಪಾಪಿಗಳಿಗೆ ಅತಿಭಯಂ ಕರವೆನಿಸುವ ವೈತರಣೀ ನದಿ ಇರುವುದೂ ಅಲ್ಲಿಯೇ. ಆ ಸಮೀಪದಲ್ಲಿ ರೌರವಾದಿ ಭಯಂಕರ ನರಕಗಳು ಇರುವುವು. ಪಾಪಿಗಳನ್ನು ಶಿಕ್ಷಿಸುವುದಕ್ಕಾಗಿ ಆ ನರಕಗಳು ಸಹಸ್ರ ಸಹಸ್ರ ಸಂಖ್ಯಾಕವಾಗಿವೆ. ಅವು ಇರುವುದು ಅಷ್ಟ ದಿಗ್ಗಜಗಳ ನೇರದಲ್ಲಿ ಸಾಲು ಸಾಲಾಗಿ, ದಕ್ಷಿಣ ದಿಕ್ಕಿನಲ್ಲಿ.

ಶ್ರೀಮದ್ಭಾಗವತದಲ್ಲಿ, ನರಕಗಳು ಘನೋದಕದ ಮಟ್ಟಕ್ಕಿಂತ ಮೇಲೆಯೂ,

ಭೂಮಿಯ ಮೇಲ್ಮಟ್ಟಕ್ಕಿಂತ ಕೆಳಗೂ ಇರುವುವೆಂದು ಹೇಳಿದೆ. ಅದೇ ಅರ್ಥವು ಬರುವಂತೆ, ಭೂಗರ್ಭದಲ್ಲಿ ಪಾತಾಳ ಲೋಕಕ್ಕಿಂತಲೂ ಕೆಳಗಿರುವ ಅಷ್ಟದಿಕ್ಪಾಲಕರ ಪಂಕ್ತಿಯಲ್ಲಿ ನರಕಗಳು ಇರುವುವೆಂದು ಇಲ್ಲಿ ಹೇಳಲಾಗಿದೆ. ಆದರೆ, ಭಾಗವತ ವಚನದಂತೆ, ನರಕಗಳು ಘನೋದಕದ ಮೇಲ್ಭಾಗದಲ್ಲಿವೆ ಎಂದಾಗ, ಸಪ್ತದ್ವೀಪ ಗಳಲ್ಲಿ ಕಡೆಯದಾದ ಪುಷ್ಕರ ದ್ವೀಪವು ನರಕಗಳಿರುವ ನೇರಕ್ಕಿಂತ ಇನ್ನೂ ಸ್ವಲ್ಪ ಕೆಳಗಿದೆ ಎಂದ ಹಾಗಾಯಿತು. ಆದುದರಿಂದ ಸಪ್ತ ದ್ವೀಪ ಸಪ್ತ ಸಾಗರಗಳು ಒಂದೇಮಟ್ಟದಲ್ಲಿಲ್ಲದೆ, ಕೆಳಕೆಳಗೆ ಮೆಟ್ಟಿಲು ಮೆಟ್ಟಲಾಗಿ ಹರಡಿವೆಯೆಂದು ಊಹಿಸ ಬೇಕು].

## ಆಧಾರ ರೂಪಗಳು

ಭೂವೋಧಸ್ತಾದ್ಘನೋದಂತು ಚತುರ್ವಿಂಶತಿಕೋಟಿಭಿಃ ॥೧೦೭॥
ಏಕೋನಶತಲಕ್ಷೈಶ್ಚ ಯೋಜನೈಃ ಸಂಮಿತಂ ಕಿಲ ।

ತತೋಧಸ್ತಾತ್ಖರ್ಪರಂತು ಶತಕೋಟಿಪ್ರವಿಸ್ತರಂ ॥೧೦೮॥
ತಚ್ಚ ಬಾಹ್ಯಾವೃತಿಜಲೇ ಹರೇರದ್ಭುತ ಕರ್ಮಣಃ ।
ಮಹಾಕೂರ್ಮ ತನೋಃಪೃಷ್ಠೇ ತಿಷ್ಠತ್ಯಣುಕಣೋಪಮಂ ॥೧೦೯॥

(ಭೂಮಿಯ ಮೇಲ್ಮೈಯಿಂದ ಅಷ್ಟದಿಗ್ಗಜಗಳು ನಿಂತ ಭೂಮಿಯವರೆಗೆ ಒಂದು ಲಕ್ಷಯೋಜನವಾಗುವುದರಿಂದ) ಆ ಭೂಮಿಯ ತಳದಿಂದ ಕೆಳಗೆ ಘನೋದಕವು ಬ್ರಹ್ಮಾಂಡದ ಖರ್ಪರದ ವರೆಗೆ 24 ಕೋಟಿ, 99 ಲಕ್ಷ ಯೋಜನ ವಿಸ್ತಾರವಾಗಿರು ವುದು. ಅದಕ್ಕೆ ಆವರಕವಾಗಿರುವ ಖರ್ಪರದ ದಪ್ಪವು 100 ಕೋಟಿ ಯೋಜನಗ ಳಷ್ಟಿರುವುದು. ಆ ಬ್ರಂಹ್ಮಾಂಡವು ಬಾಹ್ಯ ಜಲಾವರಣದಲ್ಲಿದ್ದು, ಅದ್ಭುತ ವ್ಯಾಪಾರಗಳನ್ನು ನಡೆಸುವ ಶ್ರೀಹರಿಯ ಕೂರ್ಮರೂಪದ ಬೆನ್ನಿನ ಮೇಲೆ ಒಂದು ಅಣುಕಣದಂತೆ ನಿಂತಿದೆ.

[ಮೇಲಿನ ಲೋಕಗಳನ್ನು ಆದಿಶೇಷನು ತನ್ನ ಒಂದು ಹೆಡೆಯ ಮೇಲೆ, ಸಾಸುವೆ ಕಾಳಿನಂತೆ ಧರಿಸಿದ್ದಾನೆ; ಅದು ಆತನಿಗೆ ಅಷ್ಟು ಹಗುರ ಎಂದು ಹೇಳಿರು ವರು. ಅದು ಅಷ್ಟಾದರೂ ಆದಿಶೇಷನಿಗೆ ಭಾರವೇಸರಿ. ಆದರೆ, ವಿಷ್ಣುಕೂರ್ಮನು ಇಡೀ ಬ್ರಂಹ್ಮಾಂಡವನ್ನು ಅಣುಕಣದಂತೆ ಬೆನ್ನಿನಮೇಲೆ ಇಟ್ಟುಕೊಂಡಿದ್ದಾನೆ

ಎಂದಿರುವುದು ಆದಿಶೇಷನಿಗೂ, ಭಗವಂತನಿಗೂ ಇರುವ ತಾರತಮ್ಯವನ್ನು ತೋರಿಸುವುದಕ್ಕಾಗಿಯೇ ಹೊರತು, ಅಣುವಿನಷ್ಟು ಭಾರವೆಂದು ಹೇಳುವುದಕ್ಕಲ್ಲ. ಆ ಮಾತು ಕೇವಲ ಔಪಚಾರಿಕ].

[ನರಕಗಳ ವಿಚಾರವನ್ನು ಹೇಳುವಾಗ ಅವು ದಕ್ಷಿಣ ದಿಕ್ಕಿನಲ್ಲಿವೆ ಎಂದು ಹೇಳಿದ್ದಾರೆ. ಪುರಾಣಗಳ ಪ್ರಕಾರ ದಿಕ್ಕುಗಳು ಈಗಿನವರು ಹೇಳುವಂತೆ ಸಾಪೇಕ್ಷವಲ್ಲ. ಸಪ್ತ ದ್ವೀಪಗಳಲ್ಲಿ ಕಟ್ಟಕಡೆಯ ಹೊರಬದಿಯದು ಪುಷ್ಕರದ್ವೀಪ. ಅದರ ನಡುವೆ, ಭೂವಲಯವನ್ನು ಸುತ್ತುಗಟ್ಟಿದ ದೊಡ್ಡ ಬಳೆಯಂತೆ ಮಾನಸೋತ್ತರವೆಂಬ ಪರ್ವತವಿದೆ. ಆ ಪರ್ವತದ ಇಳಿಜಾರಿನಲ್ಲಿರುವುದು ಯಮರಾಯನ ಸಂಯಮನೀಪುರ. ಅಲ್ಲಿಂದ 90° ದೂರದಲ್ಲಿ ಅದೇ ಪರ್ವತದ ಇಳಿಜಾರಿನಲ್ಲಿರುವುದು ಇಂದ್ರನ ದೇವಧಾನಿ ನಗರ. ಮಾನಸೋತ್ತರ ಪರ್ವತದ ಮೇಲೆ ಕಾಲಚಕ್ರದ ಮುಖ್ಯಪಟ್ಟಿ ಇರುವುದು. ಅದರ ಮೇಲೆ ಸೂರ್ಯರಥದ ಸಂಚಾರ. ಇಂದ್ರನಗರಿಯು ಭೂಮಂಡಲದ ಕೇಂದ್ರವಾದ ಮೇರು ಪರ್ವತಕ್ಕೆ ಪೂರ್ವದಿಕ್ಕಿನಲ್ಲಿದೆ ಎಂಬುದು ಪೌರಾಣಿಕ ವ್ಯವಹಾರ. ಅದಕ್ಕೆ ಎದುರು ದಿಕ್ಕಿನಲ್ಲಿ (ಪಶ್ಚಿಮದಲ್ಲಿ) ಮಾನಸೋತ್ತರ ಪರ್ವತದ ಇಳಿಜಾರಿನಲ್ಲಿರುವುದು ವರುಣನ ನಿಮ್ಲೋಚನೀನಗರಿ. ಯಮನಗರಿಗೆ ಎದುರು ಬದರಾಗಿರುವುದು ಕುಬೇರನ ಅಲಕಾವತೀನಗರ. ಜಂಬೂದ್ವೀಪದ ದಕ್ಷಿಣದಂಚಿನಲ್ಲಿರುವ ಭರತ ಖಂಡವು ಈಗ ನಮಗೆ ತಿಳಿದಿರುವ ಭೂಗೋಳ. ಅದರಲ್ಲಿ ಭಾರತ ದೇಶವು ದಕ್ಷಿಣ ದಿಕ್ಕಿನಲ್ಲಿರುವುದರಿಂದ, ಅದರ ದಕ್ಷಿಣದ ಕಡೆಗೆ ಯಮನಗರಿ ಇದೆ.

ಆದರೆ, ಈ ಎಲ್ಲವನ್ನೂ ಮೇರುವಿನ ದೃಷ್ಟಿಯಿಂದ ಅದರ ದಕ್ಷಿಣಕ್ಕಿರುವುವೆಂದೂ ವ್ಯವಹರಿಸುವುದುಂಟು. ಮೇರುಪರ್ವತದ ನೇರಕ್ಕೆ ಮೇಲಿರುವುದು ಧ್ರುವನಕ್ಷತ್ರ. ಭೂಮಿಯಿಂದ ಧ್ರುವನಕ್ಷತ್ರದ ವರೆಗೆ, ಮತ್ತು ಅದಕ್ಕೂ ಮೇಲೆ ಇರುವುವು ಊರ್ಧ್ವಲೋಕಗಳು ; ಭೂಗರ್ಭದಲ್ಲಿ ಕೆಳಗಿರುವುವು ಅಧೋಲೋಕಗಳು. ಸಂಧ್ಯಾವಂದನೆಯ ಕಾಲದಲ್ಲಿ ದಿಗ್ದೇವತೆಗಳನ್ನು ವಂದಿಸುವಾಗ ಈಗ ಹೇಳಿದ ದಿಕ್ಕುಗಳ ವಿಚಾರವನ್ನು ನೆನಪಿನಲ್ಲಿಡಬೇಕು].

## ಊರ್ಧ್ವ ಲೋಕಗಳು

ಭೂಮ್ಯಾ ಸಹೈವ ಸತ್ಯಂತಾ ಲೋಕಾಃ ಸಪ್ತತಥೋಪರಿ ।
ತತ್ರಾಂತರಿಕ್ಷಂ ಲಕ್ಷೇಣ ಯೋಜನಾನಾಂ ಕಿಲೋಚ್ಛ್ರಿತಂ ॥೧೧೦॥

ಅರ್ಧಕೋಟ್ಯುಚ್ಛ್ರಿತಃ ಸ್ವರ್ಗೋ ವಿಮಾನಾವಳಿ ಸಂಕುಲಃ ।
ಕೋಟಿಯೋಜನ ವಿಸ್ತಾರೌ ಲೋಕಾವೇತಾವುಭೌಕಿಲ ॥೧೧೧॥

ತತಊರ್ಧ್ವಂ ಮಹರ್ಲೋಕೋ ಯೋಜನಾನಾಂ ಸಮುಚ್ಛ್ರಿತಃ ।
ಲಕ್ಷಾಣಾಂ ಪಂಚಸಪ್ತತ್ಯಾ ಸಿದ್ಧರ್ಷಿಗಣ ಸಂಕುಲಃ ॥೧೧೨॥

ತಸ್ಮಾದೂರ್ಧ್ವಂ ಜನೋಲೋಕಃ ಸಾರ್ಧದ್ವಾದಶಲಕ್ಷಯಾ ।
ಕೋಟ್ಯೋಚ್ಛ್ರಿತೋಯೋಜನಾನಾಂ ತಪೋಲೋಕಸ್ತತಃಪರಂ ॥೧೧೩॥

ಯೋಜನಾನಾಮೇಕ ಕೋಟ್ಯಾ ಲಕ್ಷಾಣಾಮಷ್ಟಯುಕ್ತಯಾ ।
ಷಷ್ಟ್ಯಾಸಪ್ತತಿಸಾಹಸ್ರ್ಯಾಪಂಚಸಾಹಸ್ರಯುಕ್ತಯಾ ॥೧೧೪॥

ಉಚ್ಛ್ರಿತಃಕಿಲ ಸಿದ್ಧರ್ಷಿ ಸಂಕುಲಃ ಸರ್ವಸೌಖ್ಯದಃ ।
ನಾನಾರತ್ನೌಘರಚಿತಾ ಲೋಕಾಏತೇತ್ರಯಃಕಿಲ ॥೧೧೫॥

ಏಷಾಂತ್ರಯಾಣಾಮಪಿಚ ವಿಸ್ತಾರಸ್ತ್ವೇಕಧೈವಹಿ ।
ತ್ರಿಭಾಗೀಕೃತಪಂಚಾಶತ್ಕೋಟಿಯೋಜನ ಮಾನತಃ ॥೧೧೬॥

ತಚ್ಚಷೋಡಶಕೋಟೀಭಿಸ್ಸಷಟ್ಕೈಃಷಷ್ಟಿಲಕ್ಷಕೈ ।
ಸಷಟ್ಕಷಷ್ಟಿಸಾಹಸ್ರ್ಯಾಷಟ್ಶತೈಶ್ಚೈವ ಯೋಜನೈಃ ॥೧೧೭॥

ಪುನಶ್ಚಷಡ್ಭ್ಯಾಷಡ್ಭಿಶ್ಚ ಕಲೇತ ಕ್ರೋಶಯುಗ್ಮತಃ ।
ಏಕೈಕಂ ವಿಸ್ತೃತಂ ಜ್ಞೇಯಂ ಲೋಕಾನಾಂತ್ರಿತಯಂ ಬುಧೈಃ ॥೧೧೮॥

ವಿಂಶತ್ಯೈಷಾಂತು ಲೋಕಾನಾಂ ಯತ್ಕೋಟೀನಾಂ ಚತುಷ್ಟಯಂ ।
ಲಕ್ಷಾಣಿಷಟ್ಸಹಸ್ರಾಣಾಂ ಪಂಚವಿಂಶತಿರೇವಚ ॥೧೧೯॥

ಏತಾವತ್ಯಾಯೋಜನಾನಾಂ ಸಂಖ್ಯಯಾ ಪುನರುಚ್ಛ್ರಿತಃ ।
ಸ್ಯಾದ್ಬ್ರಹ್ಮಣಃ ಸತ್ಯಲೋಕಃ ಸರ್ವಕಾಮಧುರಂಧರಃ ॥೧೧೦॥

ಕೋಟೀನಾಮಷ್ಟಕಾಲ್ಲಕ್ಷದ್ವಿಷಟ್ಕಾತ್ತದುಪರ್ಯಪಿ ।
ಪಂಚಾಶದ್ಭಿಃ ಸಹಸ್ರೈಶ್ಚಾಪ್ಯುಚ್ಛ್ರಿತಃ ತದ್ವಿಧೇಃಪದಂ ॥೧೧೨॥

ವಿಸ್ತಾರಂ ತಸ್ಯಚಾಪ್ಯುಕ್ತ ಲೋಕತ್ರಯವದೇವಹಿ ।
ಕಂದವದ್ವಿಸ್ತೃತಂ ಮೂಲೇ ಮಧ್ಯೇಕ್ಷಾಮಂಚನಾಳವತ್ ॥೧೨೨॥

ಚತುರ್ಧಾಪದ್ಮದಳವದಂತೇತ್ವತ್ಯಂತ ವಿಸ್ತೃತಂ ।
ಇದಂ ಲೋಕಾತ್ಮಕಂ ಪದ್ಮಂ ಫೇನೋದಾಂಬುಜವದ್ಬಭೌ ॥೧೧೩॥

ಭೂಮಿಯನ್ನೂ ಗಣನೆಗೆ ತೆಗೆದುಕೊಂಡಾಗ, ಭೂಮಿಯಿಂದ ಸತ್ಯಲೋಕದ ವರೆಗೆ ಏಳು ಊರ್ಧ್ವ ಲೋಕಗಳು. ಭೂಲೋಕವನ್ನು ಬಿಟ್ಟು ಒಂದು ಲಕ್ಷ ಯೋಜನದ ಮೇಲೆ (ಧ್ರುವಮಂಡಲದ ವರೆಗೆ) ಅಂತರಿಕ್ಷಲೋಕ ; ಐವತ್ತು ಲಕ್ಷ (ಅರ್ಧಕೋಟಿ) ಯೋಜನದೆತ್ತರದಲ್ಲಿರುವುದು, ದಿವ್ಯಸೌಧಗಳಿಂದ ನಿಬಿಡವಾದ ಸ್ವರ್ಗಲೋಕ. ಅಂತರಿಕ್ಷ ಮತ್ತು ಸ್ವರ್ಗಲೋಕಗಳ ವಿಸ್ತಾರ ಒಂದು ಕೋಟಿ ಯೋಜನದಷ್ಟು. ಅಲ್ಲಿಂದ ಮೇಲೆ, 75 ಲಕ್ಷ ಯೋಜನದೆತ್ತರದಲ್ಲಿ ಸಿದ್ಧರು, ಋಷಿವರೇಣ್ಯರು ಮುಂತಾದವರ ಸಮೂಹಗಳಿಂದ ಮೆರೆಯುವ ಮಹರ್ಲೋಕ ವಿರುವುದು. ಅದಕ್ಕಿಂತ ಮೇಲೆ, 1,12,50000 ಯೋಜನದೆತ್ತರದಲ್ಲಿ ಜನಲೋಕ ವಿರುವುದು. ಅನಂತರ ತಪೋಲೋಕ-1,68,75,000 ಯೋಜನದೆತ್ತರದಲ್ಲಿದೆ. ಈ ಲೋಕದಲ್ಲಿಯೂ ಸಿದ್ಧರು, ಋಷಿಗಳು ಮುಂತಾದವರು ಅಸಂಖ್ಯಾತರಾಗಿ ತುಂಬಿ ರುವರು. ಇಚ್ಛಿಸಿದ ಸಕಲ ಸೌಭಾಗ್ಯಗಳೂ ಇಲ್ಲಿ ಯಥೇಚ್ಛವಾಗಿ ದೊರೆಯು ವುವು. ಈಗ ಹೇಳಿದ ಮಹರ್ಲೋಕ, ಜನಲೋಕ, ತಪೋಲೋಕ ಎಂಬ ಮೂರರ ಲ್ಲಿಯೂ ನಾನಾ ಬಗೆಯ ರತ್ನಗಳಿಂದ ಕೃತಗಳಾದ ಪ್ರಾಸಾದಗಳು ನಿಬಿಡವಾಗಿರು ವುವು. ಈ ಮೂರು ಲೋಕಗಳ ವಿಸ್ತಾರವೂ ಒಂದೇ ರೀತಿಯಾಗಿರುವುದು ; ಅದು 50 ಕೋಟಿ ಯೋಜನ ವಿಸ್ತಾರವಾದ ಬ್ರಹ್ಮಾಂಡಾಂತರದ ಮೂರನೇ ಒಂದು ಭಾಗ, ಅಥವ 16,66,66,666 ಯೋಜನ ಮತ್ತು 2 ಕ್ರೋಶ. ಈ ಎಲ್ಲಾ ಲೋಕಗಳ ಎತ್ತರಗಳನ್ನೂ (ಅವುಗಳ ಮಧ್ಯಂತರಗಳ ಸಹಿತವಾಗಿ) ಪರಿಗಣಿಸಿದಾಗ, 4,06,25,000 ಯೋಜನವಾಗುವುದು. ಇಷ್ಟೇ ಅಂತರದ ಮೇಲೆ ಸತ್ಯಲೋಕವು ವಿಸ್ತರಿಸಿರುವುದು ಎಂದರೆ, ಅದು ಭೂಮಾನದಿಂದ 8,50,00000 ಯೋಜನದ ಮೇಲಿರುವುದು. ಬ್ರಹ್ಮಸದನವಿರುವುದು ಆ ಲೋಕದಲ್ಲಿ. ಅದರ ವಿಸ್ತಾರವೂ ಅದರ ಕೆಳಗಿನ ಮೂರು ಲೋಕಗಳಷ್ಟೇ ಇರುವುದು. ಆ ಲೋಕದ ಎತ್ತರ-4,12,50,000 ಯೋಜನ. ಅಂದರೆ ಎಲ್ಲಾ ಊರ್ಧ್ವಲೋಕಗಳ ಎತ್ತರವನ್ನೂ ಕೂಡಿದರೆ 12,25,00,000 ಯೋಜನವಾಗುವುದು. ಬ್ರಹ್ಮನ ಈ ಸತ್ಯಲೋಕವು ಬುಡದಲ್ಲಿ ಒಂದು ಕಂದ ಮೂಲದಂತೆಯೂ, ನಡುವೆ ನಾಳದಂತೆ ಕಿರಿದಾಗಿಯೂ ಇದ್ದು, ಮೇಲ್ಭಾಗದಲ್ಲಿ ಅತಿವಿಸ್ತಾರವಾಗಿ, ಅರಳಿದ ಕಮಲಪುಷ್ಪದ ದಳಗಳಂತೆ ಹಬ್ಬಿರುವುದು. ವಿಶ್ವದ ಈ ಲೋಕಗಳು ಒಂದೊಂದೂ ಕಮಲಪುಷ್ಪದ ಹೋಲಿಕೆಯನ್ನು ಹೊಂದಿ ರುವುದರಿಂದ, ಇವೆಲ್ಲವೂ ಕೂಡಿ ಘನೋದಕದಿಂದ ಮೇಲೆದ್ದ ಬೃಹತ್ಕಮಲದಂತೆ ಶೋಭಿಸುವುವು.

(ಭೂಲೋಕದ ವಿಚಾರವನ್ನು ತೆಗೆದುಕೊಂಡಾಗ, ಕಮಲ ಕರ್ಣಿಕೆಯಂತೆ ನಟ್ಟನಡುವೆ ಜಂಬೂದ್ವೀಪವಿರುವುದು. ಅದರ ಸುತ್ತಲೂ, ಉಳಿದ ಆರು ದ್ವೀಪದ ಬಳೆಯಾಕೃತಿಯ ಮಾನಸೋತ್ತರ ಪರ್ವತವೂ, ಇತರ ದ್ವೀಪಗಳ ಪರ್ವತಗಳೂ ಮೇಲೆದ್ದು ನಿಂತಿರುವ ಕಮಲ ಪುಷ್ಪದ ದಳಗಳಂತಿರುವುದರಿಂದ, ಭೂಲೋಕವೂ ಕೂಡ ಘನೋದಕದ ಮೇಲಿನ ಕಮಲಪುಷ್ಪದಂತೆಯೇ ಇರುವುದು.)

## ವೈಕುಂಠಲೋಕ

ಸತ್ಯಲೋಕ ಪ್ರಮಾಣಾತ್ತು ದ್ವಿಗುಣೀಕೃತಮಾನವಾನ್ ।
ವಿಷ್ಣೋರ್ಲೋಕಸ್ತು ವಿಜ್ಞೇಯೋಯಂ ವೈಕುಂಠಂ ವಿದುರ್ಬುಧಾಃ ॥೧೨೫॥
ಕೋಟೀನಾಂ ಷೋಡಶೈಃಪಂಚವಿಂಶಲ್ಲಕ್ಷ ಯುತೈಸ್ಸಚ ।
ಭೂಲೋಕಾದುಚ್ಛ್ರಿತೋಜ್ಞೇಯೋ ವಿಸ್ತೃತಿಶ್ಚ ವಿಧೇಃಪದಾತ್ ॥೧೨೫॥
ದ್ವಿಗುಣಾತಸ್ಯವಿಜ್ಞೇಯಾ ಸಚಸರ್ಗಲಯೋಜ್ಝಿತಃ ।
ಆಚಾಂಡಖರ್ಪರಾದಾಚ ವೈಕುಂಠನಿಲಯಾದ್ಧರೇಃ ॥೧೨೬॥
ಕೋಟೀನಾಮಷ್ಟಕಂ ಪಂಚಲಕ್ಷೇತಾಲಕ್ಷ ಸಪ್ತತಿಃ ॥೧೨೭॥
ಮಧ್ಯದೇಶ ಪ್ರಮಾಣಂ ಸ್ಯಾನ್ಮುಕ್ತಾಃ ಸಂಸಾರಸಾಗರಾತ್ ।
ವಿಮಾನಾವಳಿಭಿರ್ಯತ್ರ ಸಂಚರಂತಿ ತತಸ್ತತಃ ॥೧೨೮॥

ವೈಕುಂಠಲೋಕವೆನ್ನುವ ವಿಷ್ಣುಲೋಕವು ಪ್ರಮಾಣದಲ್ಲಿ ಬ್ರಹ್ಮಲೋಕದ ಎರಡರಷ್ಟಾಗಿರುವುದು. ಅದು ಭೂಲೋಕದಿಂದ 16,25,00000 ಯೋಜನದ ಮೇಲಿರುವುದು ವೈಕುಂಠಲೋಕದ ವಿಸ್ತಾರವು ಬ್ರಹ್ಮಲೋಕದ ವಿಸ್ತಾರದ ಎರಡರಷ್ಟಾಗಿರುವುದು (ಅಂದರೆ, 16,66,666 ಯೋಜನ, 2 ಕ್ರೋಶ × 2 33,33, 33 332 ಯೋಜನ 4 ಕ್ರೋಶ. ಇದು 50 ಕೋಟಿಯ ⅔ ಭಾಗ) ಈ ಲೋಕವು ಪ್ರಳಯಾಗ್ನಿ ಮೊದಲಾದವುಗಳಿಂದ ನಾಶ ಹೊಂದುವುದಿಲ್ಲ; ಹೊಸದಾಗಿ ಸೃಷ್ಟಿಯಾಗುವುದೂ ಇಲ್ಲ. (ಪ್ರಳಯ ಕಾಲದಲ್ಲಿ ಲಯಜಲಧಿಯಾಗಿದ್ದುದು, ವೈಕುಂಠ ರೂಪದಲ್ಲಿ ಅಲ್ಲಿಯೇ ಪ್ರಕಟವಾಗುವುದು) ವೈಕುಂಠಲೋಕದ ಬುಡದಿಂದ ಮೇಲೆ ಬ್ರಹ್ಮಾಂಡ ಖರ್ಪರದ ವರೆಗಿನ ಎತ್ತರ 8,75,00,000 ಯೋಜನ ಈ ಅಳತೆಯು ವೈಕುಂಠಲೋಕದ ಮಧ್ಯ ಭಾಗಕ್ಕೆ ಅನ್ವಯಿಸುವುದು. (ಬ್ರಹ್ಮಾಂಡ ಖರ್ಪರವ

ಗೋಳಾಕೃತಿಯಾಗಿರುವುದರಿಂದ ಹೀಗೆ ಹೇಳಬೇಕು.) ಸಂಸಾರಸಾಗರದಿಂದ ಮುಕ್ತರಾದವರು ಇಲ್ಲಿ ದಿವ್ಯ ವಿಮಾನಗಳಲ್ಲಿ ಕುಳಿತು ಬೇಕು ಬೇಕಾದಲ್ಲಿ ಸಂಚರಿಸಿ ಸುಖಿಸುವರು.

## ಬ್ರಹ್ಮಾಂಡದೊಳಗಿನ ವಿಸ್ತಾರ

ಮೇರೋರ್ನಾಭೇರೂರ್ಧ್ವಮೇವಂ ಪಂಚವಿಂಶತಿ ಕೋಟಯಃ ।
ಆಚಾಂಡಖರ್ಪರಾತ್ಪ್ರೋಕ್ತಾ ಲೋಕಾಶ್ಚೈತೇ ತದಂತರಾ ॥೧೨೯॥
ಊರ್ಧ್ವಖರ್ಪರ ಪರ್ಯಂತಂ ತಥಾಧಃ ಪರಿತೋಪಿ ಚ ।
ಪ್ರತೀಚ್ಯುದೀಚೀಪ್ರಾಚೀಷಾಂ ದಕ್ಷಿಣಸ್ಯಾಂಚ ಸಂಖ್ಯಯಾ ॥೧೩೦॥
ಪಂಚವಿಂಶತಿ ಕೋಟ್ಯಸ್ಯುರಾಮೇರೋರಾಚ ಖರ್ಪರಾತ್ ।
ಮೇರೋರ್ಮೂಲಾನ್ಮಧ್ಯದೇಶಮಾರಭ್ಯ ಗಣನೇತ್ವಿದಂ ॥೧೩೧॥
ಮಿಳಿತ್ವಾಗಣನಾಯಾಂತು ಪಂಚಾಶತ್ಕೋಟಯೋಮತಾಃ ।
ಅಂಡಂತ್ವಧಸ್ತಾದೂರ್ಧ್ವಂಚ ವಿಷ್ವಕ್ಕಿಲವರ್ತುಲಂ ॥೧೩೨॥
ಸೌವರ್ಣಂ ಯೋಜನೈಸ್ತು ಸ್ಯಾಚ್ಛತಕೋಟಿ ಪ್ರವಿಸ್ತರಂ

ಈ ರೀತಿಯಾಗಿ ಮೇರು ಮೂಲದಿಂದ ಮೇಲೆ ಬ್ರಹ್ಮಾಂಡ ಖರ್ಪರದವರೆಗೆ 25 ಕೋಟಿ ಯೋಜನವಾಗುವುದು. ಭೂಮಿಯಿಂದ ಕೂಡಿದ ಸಪ್ತಲೋಕಗಳೂ, ವೈಕುಂಠ ಲೋಕವೂ ಇರುವುದು ಈ ಅಂತರದಲ್ಲಿ. ಮೇರುಮೂಲದಿಂದ ಮೇಲುಗಡೆಗಾಗಲೀ, ಕೆಳಗಡೆಗಾಗಲೀ, ಸುತ್ತಲೂ ಅಗಲಿ, ಪಶ್ಚಿಮ, ಉತ್ತರ, ಪೂರ್ವ, ದಕ್ಷಿಣಗಳ ಕಡೆಗಳಿಗಾಗಲಿ, ಬ್ರಹ್ಮಾಂಡ ಖರ್ಪರ ಪರ್ಯಂತ 25 ಕೋಟಿ ಯೋಜನದ ಪ್ರಮಾಣವೇ ಇರುವುದು. ಮೇರು ಮೂಲದ ಮಧ್ಯಬಿಂದುವಿನಿಂದ ಗಣನೆಗೆ ಬರುವುದು ಈ ಅಳತೆ. ಎದುರು ಬದುರಿನ ಇಪ್ಪತ್ತೈದು ಕೋಟಿಗಳನ್ನು ಕೂಡಿಸಿದಾಗ 50 ಕೋಟಿ ಯೋಜನವೆಂಬ ಅಳತೆಯೇ ಸಿದ್ಧ. ಈ ಕಾರಣದಿಂದ ಬ್ರಹ್ಮಾಂಡವು ಚೆಂಡಿನಂತೆ ವರ್ತುಲಾಕಾರವುಳ್ಳದೆಂದು ತಿಳಿಯಬೇಕು. ಸುವರ್ಣಮಯವಾದ ಈ ಬ್ರಹ್ಮಾಂಡ ಖರ್ಪರವು ನೂರು ಕೋಟಿ ಯೋಜನ ಮಂದವಾಗಿರುವುದು. [ಮೇರುಪರ್ವತ ಕೆಳತುದಿಯು 16 ಸಾವಿರ ಯೋಜನದಷ್ಟು ಭೂಮಿಯೊಳಗೆ ಹುದುಗಿರುವುದು. ಭೂಮಿಯ ಮೇಲೆ ಕಾಣುವ ಅದರ ಮೂಲವು 16 ಸಾವಿರ

ಯೋಜನ ವಿಸ್ತಾರವಾಗಿರುವುದು. ಆದುದರಿಂದ, ಬ್ರಹ್ಮಾಂಡದೊಳಗಿನ ಅಳತೆಗಳನ್ನು ಗಣಿಸುವಾಗ ಆ ಮೂಲದ ಕೇಂದ್ರದಿಂದಲೇ ಗಣಿಸಬೇಕು.

ಮೇರುವಿನ ಸುತ್ತಲೂ ಸಪ್ತದ್ವೀಪ ಸಪ್ತಸಾಗರಗಳು ಹರಡಿರುವುವು. ಕಟ್ಟ ಕಡೆಯ ಪುಷ್ಕರ ದ್ವೀಪದ ಮಾನಸೋತ್ತರ ಪರ್ವತದ ಇಳಿಜಾರಿನಲ್ಲಿ ಇಂದ್ರನ ಪಟ್ಟಣವಿರುವುದು ಪೂರ್ವದಿಕ್ಕು ಇತ್ಯಾದಿಯನ್ನು ಹಿಂದೆಯೇ ತಿಳಿಸಲಾಗಿದೆ. ಸತ್ಯ ಲೋಕದ ಕಡೆಗೆ ಊರ್ಧ್ವದಿಕ್ಕು; ಪಾತಾಳಾದಿಗಳ ಕಡೆಗೆ ಅಧೋದಿಕ್ಕು ಎಂದು ತಿಳಿಯಬೇಕು. ಮೇರು ಮೂಲದ ಕೇಂದ್ರದಿಂದ ಯಾವಕಡೆಗೆ ಅಳೆದು ನೋಡಿ ದರೂ 25 ಕೋಟಿ ಯೋಜನವೆಂಬುದೇ ಸಿದ್ಧಿಸುವುದು.)

## ಧಾಮತ್ರಯ

ಉದೀಚ್ಯಾಂದಿಶಿ ವಿಷ್ಣೋಸ್ತು ಸ್ಯಾದನಂತಾಸನಾಭಿಧಂ ॥೧೩೩॥
ಘನೋದಕಾಂತೇ ಶ್ವೇತರೂಪಂ ಧಾಮ ಮುಕ್ತಜನಾಶ್ರಯಂ ।

ಲಕ್ಷಯೋಜನತೋಪ್ಯೂರ್ಧ್ವಂ ತದ್ವಿದ್ವದ್ಭಿರುದಾಹೃತಂ ॥೧೩೪॥
ತಥಾಶ್ವೇತದ್ವೀಪ ಸೌಂಜ್ಞಂ ಧಾಮಕ್ಷೀರಾಂಬುಧೌಹರೇಃ ।

ತಚ್ಚೋಚ್ಛ್ರಿತಂ ಭೂಪ್ರದೇಶಾತ್ ಪಂಚಾಶಲ್ಲಕ್ಷ ಯೋಜನೈಃ ॥೧೩೫॥
ಇಮಾನಿತ್ರೀಣಿ ಧಾಮಾನಿ ಮಹಾಲಕ್ಷ್ಮ್ಯಾತ್ಮಕಾಸಿಯಾತ್ ।

ಅನಂತಾನಂತ ಮುಕ್ತೌಘೈಃ ಪೂರ್ಣಾನ್ಯಪಿ ಪುನಃ ಪುನಃ ॥೧೩೬॥
ಅವಕಾಶಪ್ರದಾನ್ಯೇವ ನಪೂರ್ಯಂತೇ ಕದಾಚನ ।

ಸಭಾಮಯಕೃತಾ ವಿಶ್ವಕರ್ಮಣಾ ನಿರ್ಮಿತಾಚಯಾ ॥೧೩೭॥
ನಪೂರ್ಯತೇ ಕಿಲ ಜನೈಃ ಕಿಮುವಾಚ್ಯಾಹರೇಃ ಪುರೀ ।

ಮುನೇರುದರಮಪ್ಯಬ್ಧೇರವಕಾಶಂ ದದೌಕಿಲ ॥೧೩೮॥
ಮುಕ್ತಾಶ್ಚವಿಷ್ಣೋರುದರಂ ಪ್ರವಿಶ್ಯಪ್ರಲಯೇಸತಿ ।

ಆನಂದಮಾತ್ರ ದೇಹತ್ವಾತ್ ತತ್ರಾಪ್ಯಾನಂದ ಭೋಗಿನಃ ॥೧೪೦॥
ನಾನಾಭೋಗಾಂಶ್ಚ ಭುಂಜಾನಾ ರಮಂತೇಕಿಲಸಂತತಂ ।

ಅಯೋಧ್ಯಾಖ್ಯಾಮುಕ್ತಮಾತ್ರಗಮ್ಯಾಯಾಂತಃಪುರೀಹರೇಃ ॥೧೪೨॥
ವೈಕುಂಠಸಪ್ತಪ್ರಾಕಾರಾಭ್ಯಂತರೇ ಸರ್ವತೋದಿಶಂ ।

ಭಾಸಯಂತೀ ಚಿತ್ರರತ್ನಗೋಪುರ ಪ್ರಭಯಾನಿಶಂ ||೧೪೩||
ಪರಮವ್ಯೋಮ ಸಂಜ್ಞಾಸ್ತೇ ವಿರಜಾಖ್ಯಾಮಹಾನದೀ ।
ತಾಂಪುರೀಂ ಪರಿತಃಪುಣ್ಯಾ ಮಜ್ಜತಾಂಲಿಂಗಭಂಗದಾ ||೧೪೪||

ಪರಿಖೇವ ಪುರಸ್ಯಾಸ್ತೇ ನಾಮುಕ್ತಸ್ತಂ ತರೇತ್ಕ್ವಿಲ ।
ಸಪ್ತಮದ್ವಾರ ಪರ್ಯಂತಂ ಪ್ರಧಾನಂಚಾಸ್ತಿ ಬಂಧಕಂ ||೧೪೫||

ತದಂತಃಶಕ್ತಿಶೂನ್ಯತ್ವಾತ್ತನ್ನಾಸ್ತೀತಿ ನಿಗದ್ಯತೇ ।
ಅತಃಪ್ರಧಾನಪರಮ ವ್ಯೋಮ್ನೋರಭ್ಯಂತರೇತ್ವಿತಿ ||೧೪೬||

ಪುರಾಣಾನಿಜಗುಃ ಪುಣ್ಯಾಂವಿರಜಾಖ್ಯಾಂ ಮಹಾನದೀಂ ।
ಮುಕ್ತಿಕಾಲೇಯೋಗ್ಯಜನೈಸ್ಸಹ ತತ್ರನಿಮಜ್ಜತಿ ||೧೪೭||

ಬ್ರಹ್ಮಾಲಿಂಗಶರೀರಸ್ಯಭಂಗೇ ತತ್ರಕೃತೇ ಸತಿ ।
ನಿರ್ಮಲಸ್ವಸ್ವರೂಪೈಃ ಸ್ವೈಃ ಸಹಾಂತಃಪುರಗೋಭವೇತ್ ||೧೪೮||

ಮುಕ್ತೇಃಪ್ರಾಕ್ ಸಪ್ತಮದ್ವಾರ ಪರ್ಯಂತಂ ಸೋಪಿ ಗಚ್ಛತಿ ।
ನತತೋಂತರ್ವಿಶೇತ್ತಾಂತು ಕೋಂತರನ್ಯೋವಿಶೇತ್ಪುರೀಂ ||೧೪೯||

ಘನೋದಕದ ಮೇಲೆ, ಉತ್ತರದಿಕ್ಕಿನಂಚಿನಲ್ಲಿ ಅನಂತಾಸನವೆಂಬ ವಿಷ್ಣು ಲೋಕವಿದೆ. ಅದು ಶ್ರೀ ದೇವಿಯ ಸ್ವರೂಪದಿಂದಲೇ ಆಗಿರುವುದು ; ತ್ರಿಗುಣಾತ್ಮಕ ಜಡವಸ್ತುವಿನಿಂದಲ್ಲ. ವೈಕುಂಠದಂತೆ ಅದೂ ಮುಕ್ತಜನರಿಗೆ ಆಶ್ರಯವಾಗಿರುವುದು. ಅದು ಲಕ್ಷಯೋಜನಎತ್ತರದ ಮೇಲಿದೆ ಎಂದು ವಿದ್ವಾಂಸರು ಹೇಳಿರುವರು. (ಘನೀಭೂತವಾದ ನೀರಿನ ಲಕ್ಷಯೋಜನವೆತ್ತರದ ಸ್ತಂಭದ ಮೇಲೆ ಈ ಲೋಕವು ವಿಸ್ತೃತವಾಗಿದೆಯೆಂದು ತಿಳಿಯಬೇಕು.

ಅದೇರೀತಿಯಾಗಿ ಶ್ರೀ ಹರಿಧಾಮ ಇನ್ನೊಂದು ಶ್ವೇತದ್ವೀಪವೆಂಬ ಹೆಸರಿನಿಂದ ಕ್ಷೀರಸಮುದ್ರದಲ್ಲಿದೆ. ಅದು ಭೂಪ್ರದೇಶದಿಂದ ಒಂದೂವರೆ ಲಕ್ಷ ಯೋಜನದ ಮೇಲೆ ಇರುವುದಾಗಿದೆ. ವೈಕುಠ, ಅನಂತಾಸನ, ಶ್ವೇತದ್ವೀಪ ಎಂಬ ಈ ಮೂರು ವೈಷ್ಣವ ಲೋಕಗಳೂ ಮಹಾಲಕ್ಷ್ಮ್ಯಾತ್ಮಕವಾದುವೇ ಸರಿ. ಅನಂತಾನಂತ ಮುಕ್ತರಿಂದ ಈ ಲೋಕಗಳು ತುಂಬಿದ್ದರೂ ಮತ್ತೆ ಮತ್ತೆ ಬರುವ ತಂಡಗಳಿಗೂ ಅವಕಾಶವನ್ನು ಕೊಡುತ್ತವೆ ; ಅವಕಾಶವಿಲ್ಲದಂತೆ ಎಂದಿಗೂ ತುಂಬುವುದೇ ಇಲ್ಲ.

ದಾನವ ಶಿಲ್ಪಿಯಾದ ಮಯನಿಂದಲೂ, ದೇವಶಿಲ್ಪಿಯಾದ ವಿಶ್ವಕರ್ಮನಿಂದಲೂ ನಿರ್ಮಿತಗಳಾದ ಸಭಾಮಂದಿರಗಳೇ ಎಷ್ಟು ಜನ ಬಂದರೆ ಅಷ್ಟುಜನರಿಗೂ ಅವಕಾಶ ಕೊಡುವ ಸಾಮರ್ಥ್ಯವನ್ನು ಹೊಂದಿರುವಾಗ ಶ್ರೀ ಹರಿಮಂದಿರಗಳ ವಿಚಾರಗಳಲ್ಲಿ ಅದನ್ನು ಕುರಿತು ಹೇಳಬೇಕಾಗಯೇ ಇಲ್ಲ. ಇನ್ನೊಂದು ಉದಾಹರಣೆ—ಅಗಸ್ತ್ಯ ಋಷಿಯ ಹೊಟ್ಟೆಯಲ್ಲಿ ಸಮಸ್ತ ಸಾಗರಗಳೂ ಅಡಗಿ ಇರಲಿಲ್ಲವೆ? ಸಕಲ ಶಕ್ತಿ ಗಳಿಗೂ ಅಧಿದೇವತೆಯಾದ ಶ್ರೀಹರಿ ಸಾಮರ್ಥ್ಯಕ್ಕೆ ಎಲ್ಲೆಯುಂಟೆ!

ಮಹಾಪ್ರಳಯದ ಕಾಲದಲ್ಲಿ ಈ ಮುಕ್ತರುಗಳೆಲ್ಲಾ ಶ್ರೀ ಹರಿಯ ಉದರ ವನ್ನು ಪ್ರವೇಶಿಸಿ, ಆನಂದ ಶರೀರಿಗಳೇ ಆದ ಅವರು ಅಲ್ಲಿಯೂ ಆನಂದಾನುಭವಿ ಗಳಾಗಿಯೇ ಇರುತ್ತಾರೆ. ಸೃಷ್ಟಿಕಾಲವು ಪುನಃ ಪ್ರಾಪ್ತವಾದಾಗ, ಧಾಮತ್ರಯ ಗಳಾದ ವಿಷ್ಣುಲೋಕಗಳಿಗೇ ಮತ್ತೆ ಬರುತ್ತಾರೆ. ಅಲ್ಲಿ ಶ್ರೀಹರಿಯನ್ನು ಸ್ತುತಿಸುತ್ತಾ, ಆ ಪರಮಪುರುಷನಿಗೆ ನಮಸ್ಕರಿಸುತ್ತಾ, ಪದೇ ಪದೇ ಅವನನ್ನು ನೋಡುತ್ತಾ, ವಿಧವಿಧವಾದ ಸುಖಗಳನ್ನು ಅನುಭವಿಸುತ್ತಾ ಯಾವಾಗಲೂ ಆನಂದಪೂರ್ಣ ರಾಗಿರುತ್ತಾರೆ.

ವೈಕುಂಠದ ಸಪ್ತಪ್ರಾಕಾರಗಳ ನಡುವೆ, ಮುಕ್ತರಿಗೆ ಮಾತ್ರ ಪ್ರವೇಶವಿರುವ ಅಯೋಧ್ಯಾ ಎಂಬ ಹೆಸರುಳ್ಳ ಶ್ರೀಹರಿಯ ಅಂತರ್ನಗರಿ ಇದೆ. ಅದು ರತ್ನ ಖಚಿತ ಗಳಾದ ಚಿತ್ರವಿಚಿತ್ರಗೋಪುರಗಳುಳ್ಳ ಪ್ರಾಸಾದಗಳ ಕಾಂತಿಯಿಂದ ಸರ್ವದಾ ದಿಕ್ಕು ದಿಕ್ಕುಗಳನ್ನು ಬೆಳಗುತ್ತಿರುವುದು. ಈ ಅಯೋಧ್ಯಾನಗರಿಯ ಪ್ರದೇಶಕ್ಕೆ 'ಪರಮವ್ಯೋಮ' ಎಂದು ಹೆಸರು. ಈ ಪಟ್ಟಣವನ್ನು ಸುತ್ತುವರಿದು ವಿರಜಾ ಎಂಬ ಮಹಾನದಿಯು ಇರುವುದು ಇದರಲ್ಲಿ ಮಿಂದವರ ಲಿಂಗ ದೇಹಗಳು ಬಿಟ್ಟು ಹೋಗುವುವು.

ಇಂತಹ ಮಹಿಮೆಯುಳ್ಳ ಪುಣ್ಯ ನದಿಯದು. ಈ ನದಿಯು ಅಯೋಧ್ಯಾ ಪಟ್ಟಣದ ಕಂದಕದಂತೆ ಇರುವುದರಿಂದ ಮುಕ್ತರಲ್ಲದವರು ಅದನ್ನು ದಾಟಿ ಹರಿಪುರ ವನ್ನು ಪ್ರವೇಶಿಸಲಾರರು.

ಹೊರಗಿರುವ ಕೋಟೆಗಳಲ್ಲಿ ಏಳನೇ ಕೋಟೆಯವರೆಗೂ ಪ್ರಧಾನ'ವೆನಿಸಿ ಕೊಳ್ಳುವ ಜಡಶಕ್ತಿಯು ಬಂಧಕವಾಗಿದೆ. ವಿರಜಾನದಿಯ ಒಳ ಆವರಣದಲ್ಲಿ ಜಡಮಾಯೆಯ ಪ್ರಭಾವವಿಲ್ಲದ ಕಾರಣ ಅದು ಅಲ್ಲಿ ಇಲ್ಲವೆಂದೇ ಹೇಳುವರು.

ಆದುದರಿಂದ ಪ್ರಧಾನ ಆಕಾಶ ಮತ್ತು ಪರಮಾಕಾಶಗಳ ನಡುವೆ ಪುಣ್ಯನದಿಯಾದ ವಿರಜೆ ಇರುವುದೆಂದು ಪುರಾಣಗಳು ಹೇಳುತ್ತವೆ. ಮುಕ್ತಿಕಾಲದಲ್ಲಿ ಬ್ರಹ್ಮನು ಮುಕ್ತಿಯೋಗ್ಯಜನರೊಡಗೂಡಿ ವಿರಜಾನದಿಯಲ್ಲಿ ಅವಗಾಹಸ್ನಾನ ಮಾಡುವನು. ಆಗ ಲಿಂಗಶರೀರಗಳು ಬಿಟ್ಟುಹೋಗಲು ಜಡವಲ್ಲದ ತಮ್ಮ ತಮ್ಮ ಸ್ವರೂಪ ದೇಹ ಗಳಿಂದಲೇ ಮುಕ್ತಜೀವರು ಬ್ರಹ್ಮನೊಡನೆ ಅಂತರ್ನಗರಿಯನ್ನು ಪ್ರವೇಶಿಸುವರು. ಮುಕ್ತಿಗೆ ಮೊದಲು ಬ್ರಹ್ಮನೂ ಕೂಡ ಹೊರಗಿನ ಸಪ್ತಮ ದ್ವಾರದವರೆಗೆ ಮಾತ್ರ ಹೋಗಿ ಬರುವನು. ಅಂದಮೇಲೆ, ಮುಕ್ತರಲ್ಲದ ಅನ್ಯರು ಯಾರು ತಾನೇ ಅಂತ ರ್ನಗರಿಯನ್ನು ಪ್ರವೇಶಿಸಿಯಾರು !

## ನವಾವರಣಗಳು

ಅಬಗ್ನೀರನಭೋಹಂಕೃನ್ಮಹತ್ತತ್ವಗುಣತ್ರಯೈಃ ।
ಬಹಿರಂಡಾದಾವರಣೈಃ ಶತಕೋಟಿಪ್ರವಿಸ್ತಾರಾತ್ ॥೧೫೦॥

ಕ್ರಮಾದ್ದಶೋತ್ತರೈರ್ಯುಕ್ತಮಂಡಾಖ್ಯಾವರಣಂ ಮಹತ್ ।
ದ್ವಿಸಪ್ತಲೋಕಾಸ್ತದಂತರಿದಂ ವಿಶ್ವಂ ಮಹಾದ್ಭುತಂ ॥೧೫೧॥

ಯಸ್ಯೈಕರೋಮಕೂಪಾಂತಃ ಪೂರ್ತ್ಯೈರ್ನಾಲಂ ಮಹಾತ್ಮನಃ ।
ಕಸ್ತಸ್ಯ ಸದೃಶೋಽದೇವೋ ದೇವೇಷು ಸೌಹೃದ್ವಿಚಾರಯ ॥೧೫೨॥

ನೂರು ಕೋಟಿ ಯೋಜನ ಮಂದವಾಗಿರುವ ಬ್ರಹ್ಮಾಂಡದ ಸುವರ್ಣಾತ್ಮಕ ಪ್ರಥಮಾವರಣವು ಒಂದಕ್ಕಿಂತ ಒಂದು ಹತ್ತು ಪಾಲು ಹೆಚ್ಚುವಿಸ್ತಾರವಾಗಿರುವ ಅಪ್ (ಜಲ), ಅಗ್ನಿ, ಈರ (ವಾಯು), ನಭ (ಆಕಾಶ) ಅಹಂಕಾರ ತತ್ವ, ಮಹ ತ್ತತ್ವ, ಮತ್ತು ಗುಣತ್ರಯಗಳೆಂಬ (ತಮ, ರಜ, ಸತ್ವ) ನವ ಆವರಣಗಳಿಂದ ಯುಕ್ತವಾಗಿದೆ. ಅತ್ಯದ್ಭುತವಾಗಿರುವ ಸಮಸ್ತ ವಿಶ್ವವೂ ಈ ಪ್ರಥಮಾವರಣದೊಳಗೆ ಅಡಗಿದೆ. ಇಂತಹ ನವಾವರಣಯುಕ್ತವಾದ ಬ್ರಹ್ಮಾಂಡವು ಯಾವ ಶ್ರೀಮನ್ನಾ ರಾಯಣನ ಒಂದು ರೋಮಕೂಪವನ್ನು ಸಂಪೂರ್ಣವಾಗಿ ತುಂಬಲಾರದೋ, ಅಂತಹ ದೇವನಿಗೆ ಸಮನಾದ ದೇವರು ಯಾರಾದರೂ ಇರುವರೇ, ವಿಚಾರಿಸಿ ನೋಡಿರಿ.

## ಮೇರುಪರ್ವತ

ಸುವರ್ಣಾತ್ಮಾ ಮೇರುರಯಂ ಲಕ್ಷಯೋಜನಮುಚ್ಛ್ರಿತಃ ।
ಪರಿತೋ ನವಭಿಃ ಖಂಡೈರ್ಮಂಡಿತಃ ಸಿದ್ಧಸೇವಿತಃ ॥೧೫೩॥

ಪ್ರಮಾಣಗಣನಾಯಾಂತು ಮಧ್ಯಮೇಸಂ ವಿದುರ್ಬುಧಾಃ ।
ಮೂಲೇಕ್ಷಾಮಃ ಕ್ರಮೇಣೇಷದೀಷದ್ವಿಸ್ತೃತಮೂರ್ತಿಮಾನ್ ॥೧೫೪॥
ಅಂತೇವಿಸ್ತಾರವಾನ್ಸ್ಯೈಮೋ ಗಿರಿರುನ್ಮತ್ತ ಪುಷ್ಪವತ್ ।
ಅತಃಷೋಡಶ ಸಾಹಸ್ರ ಯೋಜನೋ ಮೂಲತಃ ಸ್ಮೃತಃ ॥೧೫೫॥
ತಾವತ್ಯಾಸಂಖ್ಯಯೈವಾಂತರ್ಭೂಮೇರಪಿ ಸ ಮೂಲತಃ ।
ಪ್ರವಿಷ್ಟಃಸಿದ್ಧ ಯೋಗೀಂದ್ರೈರ್ಮಧ್ಯೇಮಧ್ಯೈಕೃತಾಲಯಃ ॥೧೫೬॥
ದ್ವಾತ್ರಿಂಶದ್ಭಿಃ ಸಹಸ್ರೈಸ್ತು ಯೋಜನೈರ್ಮೂರ್ಧ್ನಿ ವಿಸ್ತೃತಃ ।
ಮಂಡಲಾಕಾರತೋ ಮೂರ್ಧ್ನಿ ಮೂಲೇಚ ತ್ರಿಗುಣಃಸ್ಮೃತಃ ॥೧೫೭॥
ಏವಂಚಸಾಷ್ಟಸಾಹಸ್ರ ಚತ್ವಾರಿಂಶತ್ಸಹಸ್ರತಃ ।
ಯೋಜನಾನಾಂ ಸಮೂಲೇಸ್ಯಾನ್ಮಂಡಲಾಕಾರವಾನ್ಗಿರಿಃ ॥೧೫೮॥
ಷಡುತ್ತರ ನವತ್ಯಾತು ಸಹಸ್ರಾಣಾಂ ಸ ಮೂರ್ಧನಿ ।
ಮಂಡಲಾಕಾರವಾನ್ಪ್ರೋಕ್ತಃ ಸೌವರ್ಣಾದ್ರಿಃ ಸುರಪ್ರಿಯಃ ॥೧೫೯॥
ತನ್ಮಧ್ಯೇನಾಮತಃ ಶಾತಕೌಂಭೀಬ್ರಹ್ಮಪುರೀ ಕಿಲ ।
ವಿಚಿತ್ರರತ್ನ ಖಚಿತ ಮಂದಿರೈರುಪ ಶೋಭಿತಾ ॥೧೬೦॥
ಮಾನತೋ ದಶ ಸಾಹಸ್ರ ಯೋಜನಾ ರಾಜತೇತರಾಂ ।
ತತ್ರಗಂಧರ್ವಪತಯಃ ಸಿದ್ಧ ವಿದ್ಯಾಧರಾಧಿಪಾಃ ॥೧೬೧॥
ವಸಿಷ್ಠಾದ್ಯಾಶ್ಚ ಮುನಯೋದೇವಾಶ್ಚೇಂದ್ರಪುರೋಗಮಾಃ ।
ಉಪಾಸತೇ ರತ್ನ ಚಿತ್ರ ಸಿಂಹಾಸನಗತಂ ವಿಧಿಂ ॥೧೬೨॥
ಅಷ್ಟದಿಕ್ಷ್ವಷ್ಟದಿಕ್ಪಾಲ ಪುರಾಣಿಚ ಯಥಾಕ್ರಮಂ ।
ಸಂತಿತೇಷಾಮೇಷ ಮೇರುಸೌವರ್ಣಸ್ತಂಭವದ್ಬಭೌ ॥೧೬೩॥

ಸುವರ್ಣಮಯವಾದ ಮೇರುಪರ್ವತವು ಒಂದು ಲಕ್ಷ ಯೋಜನ ಎತ್ತರ ಉಳ್ಳದ್ದಾಗಿದೆ. ಅದರ ಸುತ್ತಲೂ ಒಂಭತ್ತು ಖಂಡಗಳು (ವರ್ಷಗಳೆಂಬ ವಿಭಾಗಗಳು) ಇವೆ. ಅದು ಸಿದ್ಧಪುರುಷರ ವಿಹಾರ ಸ್ಥಾನವಾಗಿದೆ. ಬ್ರಹ್ಮಾಂಡದ ಅಳತೆಗಳನ್ನು ಪರಿಗಣಿಸಲು ಅನುಕೂಲವಾದ ಕೇಂದ್ರ, ಈ ಮೇರುಪರ್ವತ. ಇದು ಬುಡದಲ್ಲಿ ಕಿರಿದಾಗಿದ್ದು, ಮೇಲೆ ಹೋಗುತ್ತಾ ಹೋಗುತ್ತಾ ಹೆಚ್ಚು ಹೆಚ್ಚು ವಿಸ್ತಾರವಾಗುತ್ತದೆ. ಆಕಾರದಲ್ಲಿ ಇದು ಉಮ್ಮತ್ತಿ ಹೂವನ್ನು ಹೋಲುತ್ತದೆ. ಕಿರಿದಾಗಿರುವ

ಬುಡದಲ್ಲಿ ಅದರ ಆಳತೆ ಹದಿನಾರು ಲಕ್ಷ ಯೋಜನವೆಂದು ಹೇಳಲಾಗಿದೆ. ಅದು ಹದಿನಾರು ಲಕ್ಷ ಯೋಜನದ ವರೆಗೆ ಭೂಮಿಯಲ್ಲಿಯೂ ಹುದುಗಿದೆ. ಈ ಮೇರು ಪರ್ವತದಲ್ಲಿ ಬುಡದಿಂದ ಮೇಲಿನವರೆಗೆ ಸಿದ್ಧಯೋಗೀಂದ್ರರು ಅಲ್ಲಲ್ಲಿ ವಸತಿಗಳನ್ನು ಮಾಡಿಕೊಂಡಿದ್ದಾರೆ. ಮೇಲ್ಭಾಗದಲ್ಲಿ ಅದು ಮೂವತ್ತೆರಡು ಸಾವಿರ ಯೋಜನ ಆಗಲವುಳ್ಳದ್ದಾಗಿದೆ ಮೇಲ್ಭಾಗವು ವರ್ತುಲಾಕಾರವಾಗಿಯೂ, ಅಡಿಯ ಭಾಗವು ಮುಮ್ಮೂಲೆಯದಾಗಿಯೂ ಇದೆ. ಅಂದರೆ, ಬುಡದಲ್ಲಿ ಇದರ ಸುತ್ತಳತೆಯು ನಲವತ್ತೆಂಟು ಸಾವಿರ ಯೋಜನವಾಗಿರುವುದು. ಮೇಲ್ಭಾಗದ ಸುತ್ತಳತೆಯು ತೊಂಭತ್ತಾರು ಸಾವಿರ ಯೋಜನ. ಹೀಗೆ ವರ್ತುಲಾಕಾರವಾಗಿರುವ ಮೇರು ಪರ್ವತವು ದೇವತೆಗಳಿಗೆ ಪ್ರಿಯವಾಗಿದೆ. ಮೇಲ್ಭಾಗದ ನಟ್ಟನಡುವೆ ಬ್ರಹ್ಮದೇವನ ಶಾತಕೌಂಭೀನಗರಿ ಇರುವುದು. ಅಲ್ಲಿನ ಮಂದಿರಗಳು ವಿಚಿತ್ರರತ್ನಗಳ ಆಲಂಕಾರ ದಿಂದ ಶೋಭಾಯಮಾನವಾಗಿರುವುವು. ಆ ಪಟ್ಟಣದ ಉದ್ದಗಲಗಳು ಹತ್ತುಹತ್ತು ಸಾವಿರ ಯೋಜನ. ಅಲ್ಲಿ ಗಂಧರ್ವ ಪತಿಗಳೂ, ಸಿದ್ಧಪ್ರಮುಖರೂ ವಿದ್ಯಾಧರ ಚಕ್ರವರ್ತಿಗಳೂ, ವಸಿಷ್ಠಾದಿ ಮುನೀಂದ್ರರೂ, ದೇವೇಂದ್ರನೊಡಗೂಡಿದ ದೇವತೆ ಗಳೂ, ರತ್ನ ಸಿಂಹಾಸನಾರೂಢನಾದ ಬ್ರಹ್ಮದೇವನನ್ನು ಪೂಜಿಸುವರು. ಬ್ರಹ್ಮ ಪುರಿಯ ಎಂಟು ದಿಕ್ಕುಗಳಲ್ಲಿ ಕ್ರಮವಾಗಿ ಅಷ್ಟದಿಕ್ಪಾಲಕರ ಗೃಹಗಳಿರುವುವು. ಮೇರು ಪರ್ವತವು ಈ ನಗರ ಮಂದಿರಗಳನ್ನೆಲ್ಲಾ ಹೊತ್ತು ನಿಂತಿರುವ ಸುವರ್ಣ ಸ್ಥಂಭದಂತಿದೆ.

[ಮೇರುಪರ್ವತದ ಸುವರ್ಣವು ನಮಗೆ ಪರಿಚಯವಿರುವ ಸುವರ್ಣದಂತಲ್ಲ. ಅದು ಅತಿಸೂಕ್ಷ್ಮತರವಾದು. ನಮ್ಮ ಕಣ್ಣಿಗೆ ಗೋಚರಿಸುವುದಲ್ಲ ಎಂದು ಪುರಾಣಗಳಲ್ಲಿ ಹೇಳಿದ್ದಾರೆ–"ಅದೃಶ್ಯಾಧಾತವಃ ಸರ್ವೇಸಮುತ್ಪನ್ನಾ ಜಲಾದಯಃ". ಕೆಳಗೆ ಸಣ್ಣನಾಗಿ, ಮೇಲೆ ವಿಶಾಲವಾಗಿರುವುದು, ಹೇಗೆ ಸಾಧ್ಯ ಎಂಬುದಾಗಿ ಈಗಿನವರು ಯೋಚಿಸಬಹುದು. ದೈವೀ ಪ್ರಪಂಚದ ಕಡೆಗೆ ಲಕ್ಷ್ಯವೇ ಇಲ್ಲದಿರುವ ಅವರಿಗೆ ಅದು ಅಚ್ಚರಿ ಎನಿಸುವುದು ಸಹಜ. ಆದರೆ, ಭಗವಂತನ ಸೃಷ್ಟಿ ಚಿತ್ರ ವಿಚಿತ್ರವಾದುದು ; ಆದರಲ್ಲಿ ಎಲ್ಲವೂ ಕೇವಲ ಪ್ರಕೃತಿ ನಿಯಮಗಳಿಗೆ ಒಳಪಟ್ಟು ವೆಂದು ತಿಳಿಯಬಾರದು].

> ವಿಧೇಃ ಸಂಧ್ಯಾವಂದನಾರ್ಥಂ ತತ್ರಗಂಗಾನದೀ ಸದಾ ।
> ನಿಪಂತಂತೀ ಬ್ರಹ್ಮಸಭಾಪ್ರಾಂಗಣೇ ಸೇವ್ಯತೇಖಿಲೈಃ ॥೧೬೪॥

ಜಗತಾಂ ಪಾವನಾರ್ಥಾಯ ಸಾ ಚತುರ್ದಿಕ್ಷು ಶೋಭನಾ ।
ಸುಧೇಂದುಧವಳಾ ಪದ್ಮ ಸಂಭವಸ್ಯಾಜ್ಞಯಾ ಕ್ರಮಾತ್ ||೧೬೫||
ಪ್ರವಹನ್ತೀ ಚತುರೂಪೈರದ್ಯಾಪಿ ಪರಿದೃಶ್ಯತೇ ।
ಸೀತಾಪೂರ್ವಾಬ್ಧಿಮಭ್ಯೇತಿ ತಥೇಮಂ ದಕ್ಷಿಣಾರ್ಣವಂ ||೧೬೬||
ಅಭ್ಯೇತ್ಯಲಕನಂದಾಖ್ಯಾ ವಿಖ್ಯಾತಾ ಲೋಕಪಾವನೀ ।
ಚಕ್ಷುರ್ನಾಮ್ನೀಪ್ರತ್ಯಗಬ್ಧಿಂ ಭದ್ರಾಚೋತ್ತರಸಾಗರಂ ||೧೬೭||
ಸೇವಮಾನಾನ್ ದಿಶಿದಿಶಿ ಪಾವಯಂತೀ ಪುನಃಪುನಃ ।
ಭಗೀರಥೇನಚಾನೀತಾ ಗಂಗಾ ರೂಪಾಂತರೇಣ ಸಾ ||೧೬೮||

ಸ್ವಸ್ಥಮಂದಾಕಿನೀರೂಪಾದೇವ ನಿತ್ಯಂ ಹಿಮಾಲಯೇ ।
ನಿಪತಂತೀ ಪುನಶ್ಚಾತ್ರಶಿವೇನ ಶಿರಸಾಧೃತಾ ||೧೬೯||

ಅಗ್ರೇಭಗೀರಥಂಯಾಂತಮನುಯಾಂತೀ ಪುರಾತನೀಂ ।
ದೇವಪ್ರಯಾಗೇಸ್ವಾಮೇವ ಮೂರ್ತಿಮಭ್ಯೇತ್ಯ ಕಾಪಿಲೇ ||೧೭೦||

ಪುಣ್ಯಾಶ್ರಮೇ ಪೂರ್ವದಗ್ಧಾನಪುನಾತ್ಸಗರಾತ್ಮಜಾನ್ ।

ಬ್ರಹ್ಮದೇವರ ಪ್ರಾಸಾದದ ಹೊರ ಅಂಗಳದಲ್ಲಿ, ಅವರ ಸಂಧ್ಯಾವಂದನಾರ್ಥವಾಗಿ ಗಂಗಾನದಿಯ ಧಾರೆಗಳು ಸದಾ ಸುರಿಯುತ್ತಿರುತ್ತವೆ. ಸಕಲ ದೇವತೆಗಳೂ ಆ ಗಂಗೋದಕವನ್ನು ಪಯೋಗಿಸಿ ಪುನೀತರಾಗುತ್ತಾರೆ. ಜಗತ್ತಿನ ಇತರರನ್ನು ಪಾವನಗೊಳಿಸುವ ಸಲುವಾಗಿ ಆ ನದಿಯು ಬ್ರಹ್ಮದೇವರ ಆಜ್ಞಾನುಸಾರ ನಾಲ್ಕು ದಿಕ್ಕುಗಳಿಗೂ ಪ್ರವಹಿಸುತ್ತದೆ. ಅದು ಅಮೃತದಂತೆ, ಚಂದ್ರನಂತೆ ಶುಭ್ರವರ್ಣವುಳ್ಳದ್ದಾಗಿರುವುದು. ಹೀಗೆ ಹರಿಯುತ್ತಿರುವುದನ್ನು ಈಗಲೂ ನೋಡಬಹುದು. ಸೀತಾ ಎಂಬ ಗಂಗೆಯ ವಿಭಾಗವು ಪೂರ್ವದಿಕ್ಕಿಗೆ ಹರಿದು ಪೂರ್ವ ಸಮುದ್ರವನ್ನೂ ಸೇರುತ್ತದೆ. ಅಲಕನಂದಾ ಎಂಬ ವಿಭಾಗವು ದಕ್ಷಿಣ ದಿಕ್ಕಿಗೆ ಹರಿಯುತ್ತದೆ. ಇದು ಲೋಕಪವಿತ್ರಕಾರಿಣಿಯೆಂದು ಸುಪ್ರಸಿದ್ಧವಾಗಿದೆ. ಚಕ್ಷು ಪಶ್ಚಿಮ ಸಮುದ್ರವನ್ನು ಭದ್ರಾ ಎಂಬುದು ಉತ್ತರ ಸಾಗರವನ್ನೂ ಸೇರುತ್ತವೆ. ಈ ಗಂಗಾ ವಿಭಾಗಗಳು ತಮ್ಮನ್ನು ಸೇವಿಸುವ ಜನರನ್ನು ಪವಿತ್ರಗೊಳಿಸುತ್ತಲೇ ಇರುತ್ತವೆ. ಅಲಕನಂದಾ ವಿಭಾಗವು ಹರಿಯುವ ಕಡೆಗೇನೇ ಗಂಗಾ ಪ್ರವಾಹವು ಮತ್ತೊಮ್ಮೆ ಭಗೀರಥನ ಪ್ರಯತ್ನದಿಂದ ರೂಪಾಂತರವನ್ನು ತಾಳಿ ಹರಿದು ಬಂದಿತು. ಇದು ಹಿಮಾಲಯದಲ್ಲಿ

ಈಗಲೂ ಮಂದಾಕಿನೀ ಎಂಬ ಹೆಸರಿನಿಂದ ವಿರಾಜಮಾನವಾಗಿದೆ. ಮೇಲಿನಿಂದಿಳಿದು ಬಂದ ನದೀ ಪ್ರವಾಹವು ಶಿವನ ಜಟೆಯಲ್ಲಿ ಬಂಧಿತವಾಯಿತು. ಶಿವನ ಜಟೆಯಿಂದ ಬಿಡುಗಡೆ ಹೊಂದಿ ಅದು ಭಗೀರಥನನ್ನು ಹಿಂಬಾಲಿಸಿ ಹರಿಯುತ್ತಾ, ದೇವ ಪ್ರಯಾಗದವರೆಗೆ ಬಂದಿತು. ಅದು ಅಲ್ಲಿ ಭೂಮಿಯೊಳಗಿಳಿದು, ಪಾತಾಳಲೋಕ ವನ್ನು ಹೊಕ್ಕು, ಕಪಿಲಋಷಿಯ ಆಶ್ರಮಕ್ಕೆ ಬಂದಿತು; ಮತ್ತು ಅಲ್ಲಿ ದಗ್ಧರಾಗಿ, ಬೂದಿಯ ರಾಶಿಯಾಗಿ ಬಿದ್ದಿದ್ದ ಸಗರ ಚಕ್ರವರ್ತಿಯ ಅರವತ್ತು ಸಾವಿರ ಮಕ್ಕಳನ್ನು ಅದು ಪುನೀತರನ್ನಾಗಿ ಮಾಡಿತು.

[ಬ್ರಹ್ಮಾಂಡ ಖರ್ಪರಕ್ಕೆ ತ್ರಿವಿಕ್ರಮ ಮೂರ್ತಿಯು ಮೇಲಕ್ಕೆತ್ತಿದ್ದ ಎಡ ಪಾದದ ಉಂಗುಟದ ಉಗುರು ಸ್ಪರ್ಶವಾದ ಮಾತ್ರದಿಂದ, 100 ಕೋಟಿ ಯೋಜನ ದಪ್ಪವಾದ ಆ ಖರ್ಪರವು ಬಿರುಕು ಬಿಟ್ಟಿತು. ಅಲ್ಲಿಂದ ಇಳಿದು ಬಂದ ಬ್ರಹ್ಮಾಂಡದ ಹೊರಗಿನ ಜಲಾವರಣದಿಂದ ಸ್ರವಿಸಿದ ನೀರು, ಬ್ರಹ್ಮಾಂಡದೊಳಗೆ ಪ್ರವೇಶಿಸಿ, ಕ್ರಮ ಕ್ರಮವಾಗಿ ಊರ್ಧ್ವ ಲೋಕಗಳನ್ನೆಲ್ಲಾ ಪಾವನಗೊಳಿಸಿ, ಸ್ವರ್ಗಲೋಕದಿಂದ ಕೆಳಗಿಳಿದು, ಧೃವಮಂಡಲ, ಸಪ್ತರ್ಷಿ ಮಂಡಲಾದಿಗಳನ್ನೂ ಪವಿತ್ರಗೊಳಿಸಿ, ಕಡೆಗೆ ಮೇರು ಪರ್ವತದ ಮೇಲಿನ ಬ್ರಹ್ಮಸದನದ ಅಂಗಳದಲ್ಲಿ ಸುರಿಯಿತು. ಅದು ಮುಂದೆ ನಾಲ್ಕು ವಿಭಾಗವಾಗಿ ಹರಿಯಿತು.

ತ್ರಿವಿಕ್ರಮನ ಪಾದವನ್ನು ತೊಳೆದಿಳಿದ ಗಂಗಾಜಲವು ಪಾವಿತ್ರ್ಯವನ್ನು ಹೊಂದಿ, ಲೋಕಗಳನ್ನು ಪವಿತ್ರಗೊಳಿಸುವ ಸಾಮರ್ಥ್ಯವುಳ್ಳದ್ದಾಯಿತು. ಈ ಗಂಗಾಪ್ರವಾಹವು ನೀರಿನ ರೂಪದಲ್ಲಿಯೇ ಯಾವಾಗಲೂ ಸುರಿಯುತ್ತಿದೆಯೆಂದು ತಿಳಿಯಬಾರದು. "ರೂಪಾಂತರೇಣ ವಹತಿ" ಎಂದು ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ ಈ ಗಂಗಾಜಲವು ಕೆಲವು ಕಡೆ ಆವಿಯ ರೂಪದಲ್ಲಿಯೂ, ಕೆಲವು ಕಡೆ ನಕ್ಷತ್ರಗಳ ರೂಪದಲ್ಲಿಯೂ ಇದ್ದು, ಬೇಕಾದಾಗ ದ್ರವರೂಪದಿಂದ ಪ್ರವಹಿಸುತ್ತದೆ. ನಾವು ಆಕಾಶದಲ್ಲಿ ಕಾಣುವ 'ಆಕಾಶ ಗಂಗೆಯು' ನಕ್ಷತ್ರಗಳ ಸಮೂಹವಾಗಿರುವುದು.]

## ಜಂಬೂ ದ್ವೀಪ

ಇಳಾವೃತಾಖ್ಯಖಂಡಸ್ತು ಪರಿತೋ ಮೇರುನಾಭಿತಃ ॥೧೭೧॥
ಪೂರ್ವಾದಿದಿಕ್ಷುತದ್ಬಾಹ್ಯೈರ್ಯೋಜನಾನಾಂ ಪೃಥಕ್ ಪೃಥಕ್ ।
ಸಹಸ್ರಾಷ್ಟಕ ಸಂಖ್ಯಾತೈರ್ಮಾಲ್ಯಾಧಾರೈಶ್ಚ ತದ್ಬಹಿಃ ॥೧೭೨॥

ಪರ್ವತೈಶ್ಚ ಚತುರ್ದಿಕ್ಷು ದಶಸಾಹಸ್ರ ಯೋಜನೈಃ ।
ಅತಿಕ್ರಾಂತೇ ಮಧ್ಯದೇಶೇ ಪುನರುರ್ವರಿತಂತುಯಾ
ಪಂಚಯೋಜನ ಸಾಹಸ್ರಮಿತಾ ಭೂಃ ಸರ್ವತೋಪಿಚ ।
ಕೇಲಾದ್ರೀಣಾಂ ಚತುರ್ದಿಕ್ಷು ಪುನರ್ನವ ಸಹಸ್ರವಾನ್ ॥೧೭೪॥

ಇಳಾವೃತ ವರ್ಷ (ಖಂಡ) ವೆಂಬುದು ಮೇರುವಿನ ಮಧ್ಯ ಕೇಂದ್ರದಿಂದ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ ವಿಸ್ತರಿಸಿರುವುದು. ಮೇರು ಪರ್ವತದ ಬುಡ ಭಾಗವು ಎಂಟು ಸಾವಿರ ಯೋಜನದಷ್ಟು ಅಗಲವಾಗಿರುವುದು. ಅದರ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿರುವ ಪರ್ವತಗಳಿಗೆ ಕೇಸರ ಪರ್ವತಗಳೆಂದು ಹೆಸರು. ಇವು ಹತ್ತು ಸಾವಿರ ಯೋಜನದೆತ್ತರವುಳ್ಳವುಗಳಾಗಿವೆ. ಅವುಗಳನ್ನು ಬಳಸಿ ಹೊರಗಿರುವ ಭೂಭಾಗವು ಐದು ಸಾವಿರ ಯೋಜನದಷ್ಟು. ಅಲ್ಲಿರುವ ಕೇಲಾದ್ರಿಗಳು ಅಥವ ಅವಷ್ಟಂಭ ಪರ್ವತಗಳ ಮತ್ತು ಪರಿಸ್ತರಣ ಪರ್ವತಗಳ ಸಹಿತವಾಗಿ, ಮೇರುವಿನ ಬುಡದಿಂದ ಪೂರ್ವಾದಿ ದಿಕ್ಕುಗಳ ಸೀಮಾಪರ್ವತಗಳ ವರೆಗೆ ಇಳಾವೃತ ವರ್ಷದ ಭೂಭಾಗವು ಒಂಭತ್ತು ಸಾವಿರ ಯೋಜನವಾಗುವುದು.

[ಮೇರು ಕೇಂದ್ರದಿಂದ ಒಂದೊಂದು ದಿಕ್ಕಿನಲ್ಲಿಯೂ ಆ ಪರ್ವತದ ಬುಡ ಭಾಗದ ವಿಸ್ತಾರ ಎಂಟು ಸಾವಿರ ಯೋಜನ; ಅದರ ಹೊರಗೆ ಎರಡು ಸಾವಿರ ಯೋಜನ ಭೂಭಾಗ ಮತ್ತು ಎರಡು ಸಾವಿರ ಯೋಜನದಗಲ ಕೇಸರ ಪರ್ವತಗಳ ಸನ್ನಿವೇಶ. ಉಳಿದ ಐದು ಸಾವಿರದಲ್ಲಿ ಅರ್ಧರ್ಧ ಸಾವಿರ ಯೋಜನ ಭೂಮಿ ಮತ್ತು ಎರಡೆರಡು ಸಾವಿರ ಯೋಜನ ಅವಷ್ಟಂಭ ಪರ್ವತಗಳ ಸನ್ನಿವೇಶ ಎಂದು ತಿಳಿಯ ಬೇಕು. ಈ ಪರ್ವತಗಳೂ ಕೂಡ ಹತ್ತು ಸಾವಿರ ಯೋಜನ ಎತ್ತರವುಳ್ಳವುಗಳು. ವರ್ಷ, ಖಂಡ ಎಂಬ ಪದಗಳನ್ನು ಒಮ್ಮೊಮ್ಮೆ ಪರ್ಯಾಯವಾಗಿ ಬಳಸಿದರೂ, ಖಂಡವೆಂಬುದು ಹೆಚ್ಚು ವಿಸ್ತಾರವಾದ ವರ್ಷದ ಒಂದು ಭಾಗ ಎಂದು ತಿಳಿಯಬೇಕು.

[ಭೂಮಿಯ ಮೇಲೆ ಕಾಣುವ ಮೇರು ಪರ್ವತದ ಬುಡ 16000 ಯೋಜನ ವಿಸ್ತಾರ ಹೊಂದಿರುವುದರಿಂದ, ಅದರ ಕೇಂದ್ರದಿಂದ ದಿಕ್ಕು ದಿಕ್ಕಿಗೆ ವಿಸ್ತಾರ, 8000 ಯೋಜನ. ಕೇಲಾದ್ರಿಗಳು ಎಂಬ ಪದದಿಂದ ಶ್ರೀಮದ್ಭಾಗವತದಲ್ಲಿ ಹೇಳಿರುವ ಕೇಸರ ಪರ್ವತಗಳು, ಅವಷ್ಟಂಭ ಪರ್ವತಗಳು ಮತ್ತು ಪರಿಸ್ತರಣ ಪರ್ವತಗಳನ್ನು ಗಣನೆಗೆ ತೆಗೆದುಕೊಳ್ಳಬೇಕು.]

ವರ್ಷೇಸ್ಮಿನ್ ಕೇವಲಾನಾರ್ಯಃ ಸಂಚರಂತಿ ದಿವಾನಿಶಂ ।
ಭವಾನೀ ಶಾಪತಸ್ತತ್ರ ಪುಮಾನ್ನಾಭ್ಯೇತಿಕಶ್ಚನ ॥೧೭೫॥

ಯದ್ಯಾಯಾತಿ ಸಚಸ್ತ್ರಿಸ್ಯಾದ್ಯಥೇಳಾಖ್ಯೋಮನೋಸ್ಸುತಃ ।
ಅರ್ಬುದಂಚ ಸಹಸ್ರಂಚ ತಾಸಾಂಸಂಖ್ಯಾಕಿಲೋದಿತಾ ॥೧೭೬॥

ತಾಭಿಸ್ಸಹಿತಯಾ ಗೌರ್ಯಾ ಸಹಗೌರೀಪ್ರತಿಸ್ಸದಾ ।
ಚತುರ್ಮೂರ್ತೇರ್ಭಗವತಃ ತನುಂ ಸಂಕರ್ಷಣಾಭಿದಂ ॥೧೭೭॥

ಉಪಾಸ್ತೇಕಿಲ ಯೋಗೀಂದ್ರಹೃದಯಾಂಬುಜ ಭಾಸ್ಕರಂ ।
ಚತುರ್ದಿಕ್ಷ್ವಸ್ಯ ಮರ್ಯಾದಾ ಪರ್ವತಾಸ್ಸನ್ತಿ ವಿಸ್ತೃತಾಃ ॥೧೭೮॥

ಈ ಇಳಾವೃತ ವರ್ಷದಲ್ಲಿ ಸರ್ವದಾ ನಾರಿಯರ ಸಂಚಾರ ಮಾತ್ರ ಇರುವುದು. ಪಾರ್ವತೀದೇವಿಯ ಶಾಪದ ಹೆದರಿಕೆಯಿಂದ ಪುರುಷರು ಯಾರೂ ಅಲ್ಲಿಗೆ ಪ್ರವೇಶಿಸುವುದಿಲ್ಲ. ಒಂದು ವೇಳೆ ಯಾರಾದರೂ ಅತಿಕ್ರಮ ಪ್ರವೇಶ ಮಾಡಿದರೆ, ಮನುಪುತ್ರನಾದ ಇಳಾ ಎಂಬುವನಂತೆ ಅವರೂ ಸ್ತ್ರೀಯರಾಗಿ ಮಾರ್ಪಡುವರು. ಪಾರ್ವತೀ ಪರಮೇಶ್ವರರ ಸೇವಕಿಯರಾದ ಆ ಸ್ತ್ರೀಯರು ಅರ್ಬುದದ ಮೇಲೆ ಒಂದು ಸಾವಿರ ಮಂದಿ ಇರುವರು. (100 ಕೋಟಿ, 1 ಸಾವಿರ) ಅವರಿಂದ ಸೇವಿತಳಾದ ಗೌರೀ ದೇವಿಯೊಡನೆ ಪರಮೇಶ್ವರನು ಅಲ್ಲಿವಿಹಾರ ಮಾಡುವನು. ಅವನ ವಿಹಾರ ವೆಂದರೆ, ಅದು ತನ್ನ ಹೃನ್ಮಂದಿರವಾಸಿಯಾದ ಸಂಕರ್ಷಣ ಮೂರ್ತಿಯ ಉಪಾಸನೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಶ್ರೀಮನ್ನಾರಾಯಣನ ನಾಲ್ಕು ರೂಪಗಳಲ್ಲಿ ಯೋಗಿಗಳ ಹೃದಯಗಳನ್ನು ಬೆಳಗುವ ಸೂರ್ಯನಂತಿರುವುದು ಸಂಕರ್ಷಣರೂಪ.

ಈ ಇಳಾವೃತವರ್ಷಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಸೀಮಾ ಪರ್ವತ ಗಳಿರುವುವು.

ಗಂಧಮಾದನ ಸೌಂಜ್ಞಸ್ತು ಯೋಜನದ್ವಿಸಹಸ್ರತಃ ।
ವಿಸ್ತಾರವಾನಾನಿಷಾಧಾ ದಾನೀಲಾಚ್ಚ ಸುಮುಚ್ಛ್ರಿತಃ ॥೧೭೯॥

ಇಳಾವೃತಾತ್ಪೂರ್ವಭಾಗೇ ಮರ್ಯಾದಾಪರ್ವತಃ ಸ್ಮೃತಃ ।
ದಕ್ಷಿಣಸ್ಯಾಂತು ನಿಷಧಃ ತಾವದ್ವಿಸ್ತಾರವಾನ್ಗಿರಿಃ ॥೧೮೦॥

ಅಸ್ತಿ ಪೂರ್ವಾಪರಕ್ಷಾರ ಸಿಂಧು ಪರ್ಯಂತಮಾಯತಃ ।
ಇಳಾವೃತಾತ್ಪ್ರತೀಚ್ಯಾಂತು ಮಾಲ್ಯವಾನ್ನಾಮ ಪರ್ವತಃ ॥೧೮೧॥
ಆನೀಲಾಚಾನಿಷಧಾದ್ಗಂಧಮಾದನವತ್ ಸ್ಥಿತಃ ।
ಇಳಾವೃತಾದುತ್ತರಸ್ಯಾಂ ದಿಶಿ ನೀಲಾಭಿಧೋ ಗಿರಿಃ ॥೧೮೨॥
ನಿಷಧಾಯಾಮ ವಿಸ್ತಾರೋ ವರ್ತತೇ ಸಿದ್ಧಸೇವಿತಃ ।
ಭದ್ರಾಶ್ವಾಖ್ಯೋ ಮಹಾಖಂಡಃ ಪ್ರಾಚ್ಯಾದಿಶ್ಯೇಕ ಏವತು ॥೧೮೩॥
ಆಪೂರ್ವಾಬ್ಧೇರ್ನಾಪರೋಸ್ತಿ ಹಯಗ್ರೀವೋತ್ರ ಪೂಜ್ಯತೇ ।
ಖಂಡಾಧಿಪತಿನಾ ಭದ್ರಶ್ರವಸಾ ಧರ್ಮಸೂನುನಾ ॥೧೮೪॥
ತತ್ಪೂರುಷಜನೈರೇಷ ವರ್ಷಃ ಸರ್ವತ್ರಪೂರಿತಃ ।
ಮರ್ಯಾದಾದ್ರೇಃ ಪ್ರಮಾಣೇನ ಸಹಾಯಮಪಿ ಮಾನತಃ ॥೧೮೫॥

ಗಂಧಮಾದನವೆಂಬ ಪರ್ವತವು ಎರಡು ಸಾವಿರ ಯೋಜನದಗಲವಾಗಿ, ನಿಷಧ ಪರ್ವತದ ವರೆಗೆ ಹಬ್ಬಿದೆ. (ಇದರ ಎತ್ತರ 10,000 ಯೋಜನ). ಈ ಗಂಧ ಮಾದನ ಪರ್ವತವು ಇಳಾವೃತ ವರ್ಷಕ್ಕೆ ಪೂರ್ವಭಾಗದ ಸೀಮಾ ಪರ್ವತವಾಗಿದೆ. ದಕ್ಷಿಣ ದಿಕ್ಕಿನಲ್ಲಿ ಅಷ್ಟೇ ಅಗಲವಾಗಿರುವ ನಿಷಧ ಪರ್ವತವು ಲವಣ ಸಮುದ್ರದ ಪೂರ್ವತೀರದಿಂದ ಪಶ್ಚಿಮತೀರದ ವರೆಗೆ ಹಬ್ಬಿದೆ. ಇಳಾವೃತದ ಪಶ್ಚಿಮ ದಿಕ್ಕಿನಲ್ಲಿ ಮಾಲ್ಯವಾನ್ ಎಂಬ ಪರ್ವತವು ನೀಲಪರ್ವತ ನಿಷಧ ಪರ್ವತಗಳ ನಡುವೆ ಗಂಧಮಾದನ ಪರ್ವತದಂತೆ ಹಬ್ಬಿದೆ. ಇಳಾವೃತದ ಉತ್ತರ ದಿಕ್ಕಿನಲ್ಲಿ ನೀಲವೆಂಬ ಪರ್ವತವು ನಿಷಧ ಪರ್ವತದಂತೆ ಆಯಾಮ ವಿಸ್ತಾರಗಳನ್ನು ಹೊಂದಿದೆ. ಇಲ್ಲಿ ಸಿದ್ಧ ಪುರುಷರು ವಾಸಮಾಡಿಕೊಂಡಿದ್ದಾರೆ.

[ನಿಷಧ ಮತ್ತು ನೀಲ ಪರ್ವತಗಳು ವರ್ತುಲಾಕಾರವಾದ ಜಂಬೂ ದ್ವೀಪವನ್ನು ಸುತ್ತುವರಿದಿರುವ ಕ್ಷಾರಸಮುದ್ರದ ಪೂರ್ವಪಶ್ಚಿಮ ತೀರಗಳನ್ನು ಮುಟ್ಟಿವೆ. ಅಂದರೆ, ಅವುಗಳ ಉದ್ದ ಒಂದು ಲಕ್ಷಯೋಜನೆ. ಗಂಧಮಾಧನ ಮತ್ತು ಮಾಲ್ಯವಾನ್ ಪರ್ವತಗಳು ಈ ಎರಡು ಪರ್ವತಗಳ ನಡುವೆ ಹಬ್ಬಿರುವುದರಿಂದ ಅವುಗಳ ಉದ್ದವು ಇಳಾವೃತ ವರ್ಷದ ಉದ್ದಗಲಗಳಷ್ಟೇ ಆಗಿರುವುದು (34,000 ಯೋಜನ) ಈ ಎಲ್ಲಾ ಪರ್ವತಗಳೂ 2000 ಯೋಜನ ಅಗಲ ಮತ್ತು 10,000 ಯೋಜನ ಎತ್ತರ ಉಳ್ಳವುಗಳಾಗಿವೆ. ಸಿದ್ಧಪುರುಷರು ವಾಸವಾಗಿರುವರೆಂದು ಒಂದು ಪರ್ವತದ

ವಿಷಯವಾಗಿ ಹೇಳಿದ ಮಾತನ್ನು ಎಲ್ಲಾ ಪರ್ವತಗಳಿಗೂ ಅನ್ವಯಿಸಿ ಭಾವಿಸಬೇಕು.]

ಇಳಾವೃತ ವರ್ಷದ ಪೂರ್ವದಿಕ್ಕಿನಲ್ಲಿ ಪೂರ್ವ ಸಮುದ್ರದವರೆಗೆ ಭದ್ರಾಶ್ವ ಖಂಡವೆಂಬುದೊಂದೇ ಆಗಿರುವುದು; ಬೇರೆ ಯಾವುದೂ ಇಲ್ಲ. ಇಲ್ಲಿ ಧರ್ಮ ನಂದನನಾದ ಭದ್ರಶ್ರವಸ ರಾಜನಿಂದ ಹಯಗ್ರೀವ ಮೂರ್ತಿಯು ಪೂಜಿಸಲ್ಪಡು ವನು. ಅವನ ಆಧಿಪತ್ಯಕ್ಕೊಳಗಾದ ಜನರು. ಈ ವರ್ಷದಲ್ಲಿ ತುಂಬಿರುವರು. ಈ ಭದ್ರಾಶ್ವವರ್ಷದ ವಿಸ್ತಾರವು ಮರ್ಯಾದಾಪರ್ವತವಾದ ಗಂಧಮಾದನದಷ್ಟೇ ಆಗಿರುವುದು.

ಸಪ್ತವಿಂಶತ್ಸಹಸ್ರಾಣ್ಯತು ಯೋಜನಾನಾಮುದೀರಿತಃ ।
ಪೂರ್ವತೋಜಠರಾಖ್ಯೋಸ್ಯ ಸೀಮಾಪರ್ವತ ಈರಿತಃ ॥೧೪೬॥

ತಥೈವ ದೇವಕೋಟಾಖ್ಯೋ ಗಿರಿಃಪಶ್ಚಾದುದೀರಿತಃ ।
ತೌಚಾಷ್ಟಾದಶಸಾಹಸ್ರ ಯೋಜನಾನಾಂ ಪ್ರಮಾಣತಃ ॥೧೪೭॥

ಆಯಾಮವಂತಾವುದಿತೌ ಮಧ್ಯೇನಿಷದ ನಿಲಯೋಃ ।
ದ್ವಾಭ್ಯಾಂ ದ್ವಾಭ್ಯಾಂ ಯೋಜನಾನಾಂ ಸಹಸ್ರಾಭ್ಯಾಂ ಪ್ರವಿಸ್ತೃತಾ ॥೧೪೮॥

ಭದ್ರಾಶ್ವವರ್ಷದ ವಿಸ್ತಾರವು 27,000 ಯೋಜನವೆಂದು ಹೇಳಿದೆ. (ಆದರೆ, ಗಂಧಮಾದನದಿಂದ ಪೂರ್ವಸಮುದ್ರದವರೆಗೆ 33,000 ಯೋಜನವಾಗುವುದು. ಗಂಧಮಾದನ ಮತ್ತು ಮುಂದೆ ಹೇಳುವ ಎರಡು ಪರ್ವತಗಳ ಅಗಲಗಳನ್ನು 2 + 2 + 2 ಕಳೆದರೆ ಉಳಿಯುವುದು 27,000 ಎಂದು ತಿಳಿಯಬೇಕು) ಗಂಧ ಮಾದನ ಪರ್ವತದ ಪೂರ್ವಕ್ಕೆ ಇನ್ನೊಂದು ಸೀಮಾಪರ್ವತವಿರುವುದು. ಅದರ ಹೆಸರು ಜಠರ, ಅದರಂತೆ ಇನ್ನೊಂದು ಸೀಮಾಪರ್ವತವು ದೇವಕೂಟ. ಈ ಎರಡು ಹದಿನೆಂಟು ಹದಿನೆಂಟು ಸಾವಿರ ಯೋಜನ ಉದ್ದ. (36000 ಎಂಬುದು ಸರಿ ಯಾದ ಲೆಕ್ಕ, 'ದ್ವಾಭ್ಯಾಂ' ಎಂಬುದನ್ನು ಯೋಜಿಸಬೇಕು) ಉಳ್ಳವುಗಳಾಗಿವೆ; ಎರಡೆರಡು ಸಾವಿರ ಯೋಜನ ಅಗಲವುಳ್ಳವುಗಳಾಗಿವೆ.

ಏಕಸ್ಮಿನ್ನಪಿ ವರ್ಷೇಸ್ಮಿನ್ ದ್ವೌಗಿರೀ ನಿರ್ಮಿತೌಕ್ರಮಾತ್ ।
ಚತುರ್ದಿಕ್ಷುಚ ಸಾಮ್ಯಾಯ ಪ್ರತೀಚ್ಯಾಂಚೈವಮೇವಹಿ ॥೧೪೯॥

ಗಂಧಮಾದನ ಮಾನೇನ ಸಹಪೂರ್ವಾಚಲಾಂತರೇ ।
ವರ್ಷೋಯಂ ನವಸಾಹಸ್ರ ಸಮ್ಮಿತೋಽಭವೇತ್ಕಿಲ ॥೧೫೦॥

ನಚೇನ್ನ ವಾನಾಂ ವರ್ಷಾಣಾಮುಪಿಚ ಗ್ರಂಥ ಏವತು ।
ವೀಪ್ಸಾ ನವನವೇತ್ಯುಕ್ತಾನ ಸ್ಯಾತ್ತೇನೇತ್ಥಮೂಢ್ಯತಾಂ ॥೧೯೧॥
ಅತಏಕೋಪಿ ವರ್ಷೋಯಂತ್ರೇಧಾಸ್ಯಾತ್ಖಂಡಿತೋದ್ರಿಭಿಃ ।
ಸರ್ವಭಾಗೇಪಿ ಸಾಮ್ಯಾಯ ನವತ್ವಂಚ ಸಹನ್ಯತೇ ॥೧೯೨॥
ಏವಂ ಪಶ್ಚಿಮತೋಪ್ಯೂಹ್ಯಂ ದ್ವೀಪಾಲಂಕೃತಯೇ ಬುಧೈಃ ।

[ಭದ್ರಾಶ್ವವೆಂಬುದು ಒಂದೇವರ್ಷವಾದರೂ ಇದರಲ್ಲಿ ಕ್ರಮವಾಗಿ ಎರಡು ಪರ್ವತಗಳು ನಿರ್ಮಿತವಾಗಿವೆ. ನಾಲ್ಕು ದಿಕ್ಕುಗಳಲ್ಲಿಯೂ ಕಲಾದೃಷ್ಟಿಯಿಂದ ಸಮಾನತೆ ಇರುವಂತೆ ಮಾಡುವುದಕ್ಕಾಗಿ ಈ ಪರ್ವತಗಳ ಸೃಷ್ಟಿ. ಪಶ್ಚಿಮದ ವರ್ಷದಲ್ಲಿಯೂ ಹೀಗೆ ಎರಡು ಪರ್ವತಗಳಿವೆ. ಗಂಧಮಾದನ ಪರ್ವತದ ಪೂರ್ವ ದಿಕ್ಕಿನಲ್ಲಿರುವ ಈ ಎರಡು ಪರ್ವತಗಳಿಂದ ಭದ್ರಾಶ್ವವರ್ಷವು ಒಂಭತ್ತು ಒಂಭತ್ತು ಸಾವಿರ ಯೋಜನದ ಮೂರು ವಿಭಾಗಗಳನ್ನು ಹೊಂದಿದೆ. ಪುರಾಣಗ್ರಂಥಗಳಲ್ಲಿ ಒಂದೊಂದು ವರ್ಷವೂ 9000 ಯೋಜನ ವಿಸ್ತಾರ ಉಳ್ಳದೆಂದು ಹೇಳಿದೆ. 27,000 ಯೋಜನ ಭೂಭಾಗವುಳ್ಳ ಭದ್ರಾಶ್ವ ವರ್ಷವು ಹೀಗೆ ವಿಭಕ್ತವಾಗಿದೆ.

ಇಲ್ಲದಿದ್ದಲ್ಲಿ 9000 ಯೋಜನವೆಂಬ ಮಾತು ಅದಕ್ಕೆ ಅನ್ವಯವಾಗದೆ ಹೋಗುತ್ತಿತ್ತು. ಅದುದರಿಂದ ಒಂದೇ ಆದ ಈ ವರ್ಷವು ಪರ್ವತಗಳಿಂದ ಮೂರು ಭಾಗವಾಗಿ ಮಾಡಲ್ಪಟ್ಟಿದೆ. ಇದರಿಂದ ಎಲ್ಲಾ ದಿಕ್ಕುಗಳಲ್ಲಿಯೂ ಸಮಾನಲಕ್ಷಣವು ಉಂಟಾಯಿತು; 9000 ಯೋಜನವೆಂಬ ಮಾತೂ ಹೊಂದಿಕೊಂಡಿತು. ಇದೇ ರೀತಿ ಪಶ್ಚಿಮದ ವರ್ಷದಲ್ಲಿಯೂ ಇರುವುದನ್ನು ಊಹಿಸಿಕೊಂಡರೆ, ಜಂಬೂದ್ವೀಪವು ಕಲಾದೃಷ್ಟಿಯಿಂದ ಸುಂದರವಾಗಿರುವುದು ವ್ಯಕ್ತವಾಗುತ್ತದೆ.

[ಶ್ರೀ ವಾದಿರಾಜ ಗುರುಸಾರ್ವಭೌಮರ ವಿಮರ್ಶಾತ್ಮಕ ದೃಷ್ಟಿಯು ಕೇವಲ ತರ್ಕಕ್ಕೆ ಮಾತ್ರ ಸೀಮಿತವಾಗದೆ, ಕಲಾಭಿಜ್ಞತೆಯನ್ನೂ ಹೊಂದಿರುವುದು ಗಮನಾರ್ಹವಾದ ಅಂಶ. ವಿಶ್ವವನ್ನು ಸೃಷ್ಟಿಸಿದ ಭಗವಂತನು ಕಲಾಭಿಜ್ಞರಿಗೆಲ್ಲಾ ಗುರುವೆಂಬುದೂ ಇಲ್ಲಿ ಸ್ಪಷ್ಟವಾಯಿತು.]

ಹರಿವರ್ಷೋದಕ್ಷಿಣಸ್ಯಾಂ ನಿಷಧಾಖ್ಯಮಹಾಗಿರೇಃ ॥೧೯೩॥
ನವಯೋಜನ ಸಾಹಸ್ರ ವಿಸ್ತೃತಃ ಕಿಲವರ್ತತೇ ।

ನೃಸಿಂಹರೂಪೀ ಭಗವಾನ್ ಪ್ರಹ್ಲಾದೇನ ಮಹಾತ್ಮನಾ ॥೧೯೪॥
ಅದ್ಯಾಪಿ ಪೂಜ್ಯತೇ ನಿತ್ಯಂ ಸಹತದ್ವರ್ಷಪೂರುಷೈಃ ।
ತತಸ್ತು ಹೇಮಕೂಟಾಖ್ಯ ಸೀಮಾಗಿರಿರುದಾಹೃತಃ ॥೧೯೫॥

ನಿಷಧವೆಂಬ ಮಹಾಪರ್ವತದ ದಕ್ಷಿಣ ದಿಕ್ಕಿನಲ್ಲಿ 9000 ಯೋಜನ ವಿಸ್ತಾರವಾದ ಹರಿವರ್ಷವೆಂಬುದು ಇರುವುದು ನಿಜ. ಇಂದಿಗೂ ಅಲ್ಲಿ ಪ್ರಹ್ಲಾದರಾಯನು ಆ ವರ್ಷದ ಪ್ರಜೆಗಳೊಂದಿಗೆ ನೃಸಿಂಹರೂಪಿಯಾದ ಭಗವಂತನನ್ನು ಪೂಜಿಸುತ್ತಿದ್ದಾನೆ. ಆ ವರ್ಷಕ್ಕೆ ಸೀಮಾ ಪರ್ವತವಾಗಿರುವುದು ಹೇಮಕೂಟವೆಂಬ ಪರ್ವತ.

ವಿಸ್ತಾರಃ ಪೂರ್ವಗಿರಿವದಾಯಾಮಸ್ತು ದಶೋನ್ನತಃ ।
ತತಃ ಕಿಂಪುರುಷಾಖ್ಯಸ್ತು ಖಂಡೋ ನವಸಹಸ್ರಕಃ ॥೧೯೬॥
ಯೋಜನನಾಂ ವಿಸ್ತೃತೋಽಸ್ತಿ ತಸ್ಯಾಪಿ ಹಿಮವಾನ್ ಗಿರಿಃ ।
ಮರ್ಯಾದಾಪರ್ವತಃ ಪ್ರೋಕ್ತೋವಿಸ್ತಾರೋಽಸ್ಯಾಪಿಪೂರ್ವವತ್ ॥೧೯೭॥
ಆಯಾಮೋಽಸ್ಯಾಪಿ ಪೂರ್ವಾದ್ರೇರ್ದಶೋನಃ ಪರಿಕೀರ್ತಿತಃ ।
ಸಿಂಧೋರ್ಮಂಡಲ ರೂಪತ್ವಾತ್ತ್ವಮಾದೂನತ್ವಮೇತಯೋಃ ॥೧೯೮॥
ಅಸ್ಮಿನ್‌ಕಿಂಪುರುಷೇಖಂಡೇ ರಾಮಂ ಸೀತಾಪತಿಂ ಪ್ರಭುಂ ।
ಸಹತದ್ವರ್ಷಪುರುಷೈರುಪಾಸ್ತೇ ಹನುಮಾನ್ನಿಲ ॥೧೯೯॥

ಹೇಮಕೂಟ ಪರ್ವತದ ಅಗಲ ಎತ್ತರಗಳು ಅದರ ಹಿಂದಿರುವ ನಿಷಧ ಪರ್ವದಂತೆಯೇ ಇರುವುವು–2000 ಯೋಜನ ಅಗಲ ಮತ್ತು 10 000 ಯೋಜನ ಎತ್ತರ. ಆದರೆ ಆ ಪರ್ವತದ ಉದ್ದವು ನಿಷಧ ಪರ್ವತದ ಉದ್ದಕ್ಕಿಂತ ಹತ್ತು ಪಾಲು ಕಡಿಮೆಯಾಗಿದೆ. ಅಂದರೆ, ನಿಷೇಧ ಪರ್ವತದ ಉದ್ದ ಒಂದು ಲಕ್ಷ ಯೋಜನ; ಹೇಮಕೂಟ ಪರ್ವತದ ಉದ್ದ 90,000 ಯೋಜನ. ಈ ಪರ್ವತ ಅನಂತರ ಇರುವುದು ಕಿಂಪುರುಷ ಖಂಡ. ಅದರ ವಿಸ್ತಾರ 9000 ಯೋಜನ. ಈ ಕಿಂಪುರುಷ ವರ್ಷಕ್ಕೆ ಮರ್ಯಾದಾ ಪರ್ವತವಾಗಿರುವುದು ಹಿಮವತ್ಪರ್ವತ. ಇದರ ಅಗಲ ಎತ್ತರಗಳು ಹಿಂದೆ ಹೇಳಿದ ಪರ್ವತಗಳ ಅಗಲ ಎತ್ತರಗಳಂತೆಯೇ ಸರಿ. ಆದರೆ, ಉದ್ದವು ಮಾತ್ರ ಹೇಮಕೂಟ ಪರ್ವತದ ಉದ್ದಕ್ಕಿಂತ ಹತ್ತು ಪಾಲು ಕಡಿಮೆ. ಎಂದರೆ, ಪೂರ್ಣಾಂಕಗಳಲ್ಲಿ ಅದು 80,000 ಯೋಜನವಾಗುದು. (81,000) ವರ್ತುಲಾಕಾರವಾದ ಜಂಬೂ ದ್ವೀಪವನ್ನು ಸುತ್ತುವರಿದಿರುವ ಲವಣ

ಸಮುದ್ರವೂ ವರ್ತುಲಾಕಾರವಾಗಿರುವುದರಿಂದ, ಹಿಂದೆ ಹೇಳಿದ ಎರಡು ಪರ್ವತಗಳು ಕ್ರಮವಾಗಿ ಹತ್ತು ಅಂಶಗಳಿಂದ ಕಡಿಮೆಯಾಗಿರುವುವು. ಈ ಕಿಂಪುರುಷ ಖಂಡದಲ್ಲಿ ಸ್ವಾಮಿಯಾದ ಸೀತಾಪತಿ ಶ್ರೀರಾಮಚಂದ್ರನನ್ನು ಕಿಂಪುರುಷ ವರ್ಷದ ಪ್ರಜೆಗಳೊಡಗೂಡಿ ಹನುಮಂತನು ಪೂಜಿಸಿ ಧ್ಯಾನ ಮಾಡುವನು.

[ವರ್ತುಲಾಕಾರದ ಆಕೃತಿಯಲ್ಲಿ ಮಧ್ಯರೇಖೆಯಿಂದ ಉತ್ತರಕ್ಕೂ ದಕ್ಷಿಣಕ್ಕೂ ಹೋದಂತೆಲ್ಲಾ ಅಲ್ಲಲ್ಲಿ ಎಳೆಯುವ ರೇಖೆಗಳ ಉದ್ದವು ಕ್ರಮವಾಗಿ ಕಡಿಮೆಯಾಗುತ್ತಾ ಹೋಗುವುದೆಂಬ ರೇಖಾಗಣಿತದ ಮಾತನ್ನು ಶ್ರೀ ವಾದಿರಾಜರು ಇಲ್ಲಿ ಆಡಿ ತೋರಿಸಿರುವರು. ೯೯ನೇ ಶ್ಲೋಕದಲ್ಲಿ ಖಂಡ, ವರ್ಷ ಎಂಬ ಪದಗಳನ್ನು ಪರ್ಯಾಯ ಪದಗಳಂತೆ ಉಪಯೋಗಿಸಿರುವುದನ್ನು ಕಾಣಬಹುದು. ಆದರೆ, ಪುರಾಣಾಂತರದಲ್ಲಿ ಕಿಂಪುರುಷ ವರ್ಷದ ಪ್ಲಕ್ಷಖಂಡದಲ್ಲಿ ಹನುಮಂತನು ಶ್ರೀರಾಮ ಪೂಜಾಧುರಂಧರನಾಗಿರುವನೆಂದು ಹೇಳಿರುವುದರಿಂದ, ವರ್ಷವೆಂಬುದರ ಭಾಗ ಖಂಡವೆಂಬುದು ನಿಶ್ಚಿತವಾಗುವುದು.

ಆಧುನಿಕ ಭೂಗೋಳ ಶಾಸ್ತ್ರವು ಹೇಳುವಂತೆ ಭೂಮಿಯೆಂಬುದು ಸೌರ ವ್ಯೂಹಕ್ಕೆ ಸೇರಿದ ಒಂದು ಗೋಳಾಕೃತಿಯ ಗ್ರಹ ಎಂದು ಭಾವಿಸಿರುವವರು, ಪುರಾಣೋಕ್ತ ಭೂಗೋಳವನ್ನು ಶ್ರವಣಮಾಡಿಕೊಳ್ಳಬೇಕು.]

ತತಸ್ತು ಭಾರತೋವರ್ಷಃ ಪೂರ್ವವರ್ಷಪ್ರಮಾಣವಾನ್ ।
ಆದಕ್ಷಿಣಾರ್ಣವಾತ್ಸೋಽಪಿ ನರಾಣಾಂ ಪುಣ್ಯದಃ ಸ್ಮೃತಃ ॥೨೦೦॥
ಅತ್ರಾಪಿ ಹಿಮವಚ್ಛೃಂಗೇ ಪುಣ್ಯೇ ಬದರಿಕಾಶ್ರಮೇ ।
ನರೇಣಸಹಿತೋನಾರಾಯಣಃ ಸಿದ್ಧರ್ಷಿಸೇವಿತಃ ॥೨೦೧॥
ನಾರದೇನಾರ್ಚ್ಯತೇ ನಿತ್ಯಂ ಸಹ ಸಪ್ತರ್ಷಿ ಪೂರ್ವಕೈಃ ।
ವ್ಯಾಸರೂಪೀಸ ಭಗವಾನತ್ರೈವ ಕಿಲ ಪೂಜ್ಯತೇ ॥೨೦೨॥
ವಾಯೋಸ್ತೃತೀಯ ರೂಪೇಣ ಮಧ್ವೇನ ಮುನಿಭಿಸ್ಸಹ ।

ಕಿಂಪುರುಷ ವರ್ಷದ ನಂತರ ಅದರಷ್ಟೇ ವಿಸ್ತಾರವುಳ್ಳ ಭಾರತ ವರ್ಷವು ದಕ್ಷಿಣ ಸಮುದ್ರದ ಪರ್ಯಂತ ಹಬ್ಬಿದೆ. ಇದು ಮಾನವರಿಗೆ ಪುಣ್ಯಪ್ರದವಾದ ಭೂಮಿ. ಈ ವರ್ಷದಲ್ಲಿನ ಮರ್ಯಾದಾ ಪರ್ವತವಾದ ಹಿಮಾಲಯದಲ್ಲಿ, ಶಿಖರ

ಪ್ರದೇಶವಾದ ಬದರಿಕಾಶ್ರಮದಲ್ಲಿ ನರನಿಂದ ಸಹಿತನಾದ ನಾರಾಯಣನು ಸಿದ್ಧರಿಂದಲೂ, ಋಷಿಗಳಿಂದಲೂ ಸೇವಿತನಾಗಿದ್ದಾನೆ. ನಾರದರು ನಿತ್ಯವೂ ಇಲ್ಲಿಗೆ ಬಂದು ಸಪ್ತರ್ಷಿಗಳಿಂದ ಕೂಡಿಕೊಂಡು ನರನಾರಾಯಣರನ್ನು ಪೂಜಿಸುತ್ತಾರೆ. ವೇದವ್ಯಾಸ ರೂಪದಿಂದಿರುವ ಭಗವಂತನೂ ಕೂಡ ಇತರ ಮುನಿವರ್ಯರಿಂದೊಡಗೂಡಿದ, ವಾಯುದೇವನ ತೃತೀಯಾವತಾರರಾದ ಮಧ್ವಾಚಾರ್ಯರಿಂದ ಇಲ್ಲಿ ಪೂಜಿಸಲ್ಪಡುತ್ತಾನೆ.

[ ಭಾರತವರ್ಷ ಎಂದ ಕೂಡಲೇ ಈಗಿನವರ ಮನಸ್ಸಿಗೆ ಬರುವುದು ಹಿಮಾಲಯಾ ಕನ್ಯಾಕುಮಾರಿಗಳ ನಡುವೆ ಇರುವ 2000 ಮೈಲಿ ವಿಸ್ತಾರವಾದ ಭಾರತ ದೇಶ. ದಕ್ಷಿಣ ಸಮುದ್ರ ಎಂದಾಗ, ಹಿಂದೂ ಮಹಾಸಾಗರವೆಂದೇ ಅವರು ಭಾವಿಸುವರು. ಇದು ಈಗಿನ ಭೂಗೋಳ ಪಾಠದ ಪ್ರಭಾವ. ನಿಜಸ್ಥಿತಿ ಬೇರೆಯೇ ಆಗಿರುವುದು. ಪುರಾಣಗಳಲ್ಲಿ ಭರತವರ್ಷವು ಗಂಗಾ ಉಗಮ ಸ್ಥಾನದಿಂದ ಕನ್ಯಾಕುಮಾರಿಯವರೆಗೆ ಎಂದೂ, ಅದರ ವಿಸ್ತಾರ ಒಂದು ಸಾವಿರ ಯೋಜನವೆಂದೂ, ಪುನಃ ಅದರ ವಿಸ್ತಾರ 9000 ಯೋಜನವೆಂದೂ ಮೂರು ಬಗೆಯಾಗಿ ವರ್ಣಿಸಿದ್ದಾರೆ.

ಮೊದಲು ಹೇಳಿದುದು ಕೇವಲ ದಕ್ಷಿಣೋತ್ತರ 2000 ಮೈಲಿ (333 ಯೋಜನ) ಇರುವ ಭಾರತ ದೇಶ. ಇದು ಭರತವರ್ಷದ ಅತ್ಯಂತ ಪ್ರಮುಖವಾದ ಭಾಗ. ಭಗವಂತನ ನಾರಸಿಂಹಾದಿ ಏಳು ಅವತಾರಗಳು ಆದುದ ಇಲ್ಲಿ. ಜಂಬೂ ದ್ವೀಪದ ಮುಖ್ಯ ರಾಜಧಾನಿಯಾದ ಹಸ್ತಿನಾವತಿ ಇದ್ದುದು ಇಲ್ಲಿ. (ಈಗಿನ ಹಳೆಯ ದೆಹಲಿ) ಗಂಗಾದಿ ಪುಣ್ಯನದಿಗಳೂ, ಕಾಶಿ-ಕೇದಾರ-ಮಾಯಾ-ಕರಿಗಿರಿ-ಮಧುರಾ-ದ್ವಾರಕಾ-ವೇಂಕಟಾದ್ರಿ-ಶ್ರೀಮುಷ್ಣ ಮೊದಲಾದ ಪುಣ್ಯಕ್ಷೇತ್ರಗಳೂ ಇರುವುದು ಇಲ್ಲಿ. ಈ ದೇಶದಲ್ಲಿ ಆಚರಿಸುವ ಪುಣ್ಯಗಳು ವಿಪುಲವಾಗಿ ಶೀಘ್ರಫಲಕಾರಿಗಳಾಗುವುವು-ಅದೂ, ಈ ಕಲಿಯುಗದಲ್ಲಿ ! ಈ ದೇಶದ ಉತ್ತರದ ಮೇರೆಯಾಗಿರುವುದು ಕಿರು ಹಿಮಾಲಯಾ ; ಅಲ್ಲಿರುವುದು ಅಣು ಬದರಿ.

ಎರಡನೆಯದಾಗಿ ಹೇಳಿದ 1000 ಯೋಜನ ಎಂದರೆ, 6000 ಮೈಲಿ ; ಹಿಂದೂ ಮಹಾಸಾಗರದಿಂದ ಉತ್ತರ ಧ್ರುವ ಪ್ರದೇಶದವರೆಗೆ. ಗೋಳಾಕೃತಿಯ ಭರತಖಂಡದ ಮುಖ್ಯ ಭೂಭಾಗವೇ ಈಗಿನವರು ಕಂಡಿರುವ ಭೂಗೋಳ. ಇದು ಕರ್ಮಭೂಮಿಯೆನಿಸಿದ ಭರತವರ್ಷದ ಒಂದು ಭಾಗವೇ ಆದುದರಿಂದ, ಆಫ್ರಿಕಾ,

ಅಮೇರಿಕಾ, ಆಸ್ಟ್ರೇಲಿಯಾ ಮೊದಲಾದ ಎಲ್ಲಾ ಭೂಭಾಗಗಳೂ ಕರ್ಮಭೂಮಿಯಲ್ಲಿ ಸೇರಿದುವೇ ಸರಿ. ಆದುದರಿಂದಲೇ ದಕ್ಷಿಣ ಅಮೇರಿಕಾದ ಮೆಕ್ಸಿಕೋ ಮುಂತಾದ ಪ್ರದೇಶಗಳಲ್ಲಿ ವೈದಿಕ ದೇವತಾ ವಿಗ್ರಹಗಳನ್ನೂ, ವೈದಿಕಸಂಸ್ಕೃತಿಯ ಇತರ ಸ್ಮಾರಕಗಳನ್ನೂ ಈಗಲೂ ಕಾಣಬಹುದಾಗಿದೆ. ಕಲಿಗಾಲದ ಪ್ರಭಾವದಿಂದ ಆ ಸಂಸ್ಕೃತಿಯು ಭಾರತ ದೇಶದಲ್ಲಿ, ಅದರಲ್ಲಿಯೂ ಕರ್ಣಾಟಕದಲ್ಲಿ, ಇನ್ನೂ ಉಳಿದು ಕೊಂಡಿದೆ. ಆದುದರಿಂದ ಇಲ್ಲಿ ಆಚರಿಸುವ ಪುಣ್ಯಪಾಪಗಳಿಗೆ ಹೆಚ್ಚು ಬೆಲೆ ; ಇನ್ನಿತರ ಭರತ ಖಂಡದ ಭಾಗಗಳಲ್ಲಿ ಬೆಲೆ ಇಲ್ಲವೆಂದಲ್ಲ, ಅಲ್ಪ ಬೆಲೆ ಎಂದು ಮಾತ್ರ ತಿಳಿಯಬೇಕು. ಅಮೇರಿಕಾ ಮೊದಲಾದ ದೇಶಗಳಲ್ಲಿಯೂ ಶ್ರದ್ಧೆಯಿಂದ ಆಚರಿಸುವ ಕರ್ಮಗಳಿಗೆ ಪೂರ್ಣಬೆಲೆ ಇದ್ದೇ ಇದೆ.

ಸಾಮಾನ್ಯವಾಗಿ ಪುರಾಣ ಹೇಳುವವರು ಭರತಖಂಡವು ಗೋಳಾಕಾರವಾಗಿ ರುವುದನ್ನು ತಿಳಿದಿರುವುದಿಲ್ಲ. ಆದರೆ, ಶ್ರೀಮದ್ಭಾಗವತದಲ್ಲಿ ಹೇಳಿರುವ ಉದಗಯನ, ದಕ್ಷಿಣಾಯನ, ವೈಷುವದಯನ (ವಿಷುವದ್ರೇಖೆಗೆ ನೇರವಾಗಿ ಸೂರ್ಯನ ಸಂಚಾರ) ಎಂಬುದನ್ನು ಅರ್ಥಮಾಡಿಕೊಂಡರೆ ಈ ಗೋಳಾಕೃತಿಯ ಭಾವನೆ ಮನಸ್ಸಿಗೆ ಬರುವುದು, (ಪಂಚಮಸ್ಕಂಧ ಭಾಗವತ). ಈಗಿನ ಪಂಡಿತರು ಭೂಗೋಳವು ಸ್ಥಿರವಾಗಿ ಒಂದು ಕಡೆ ಕೂತಿದೆ ಎಂದರೆ ನಂಬುವುದಿಲ್ಲ. ಭೂಮಿಯು ಸೌರವ್ಯೂಹದ ಒಂದು ಗ್ರಹ ಎಂದು ಅವರು ಭೂಗೋಳ ಪಾಠದಿಂದ ಗ್ರಹಿಸಿದ್ದಾರೆ. ಆದರೆ, ದಕ್ಷಿಣ ಧ್ರುವ ಪ್ರದೇಶಕ್ಕೆ ಹೋಗಿದ್ದ ಪರಿಶೋಧನಾ ತಂಡದಲ್ಲಿ ಒಬ್ಬರಾಗಿದ್ದ ಬೆಂಗಳೂರಿನ ಅನಂತರಾಮು ಎಂಬುವರು, "ದಕ್ಷಿಣ ಧ್ರುವ ಪ್ರದೇಶವು ಶಂಖುವಿನ ಆಕೃತಿಯಲ್ಲಿ ಕೆಳಗೆ ಚಾಚಿಕೊಂಡಿದೆ ; ಈ ಪ್ರದೇಶದ ಪರಿಶೋಧನೆಯನ್ನು ಪೂರ್ಣ ವಾಗಿ ಯಾರೂ ನಡೆಸಿಲ್ಲ" ಎಂದು ತಿಳಿಸಿದ್ದಾರೆ, ಅಂದರೆ, ಭರತ ಖಂಡವೆಂಬ ನಮ್ಮ ಗೋಳವು ಜಂಬೂ ದ್ವೀಪದಂಚಿನಲ್ಲಿ ಕೂತಿದೆ ಎನ್ನಲು ಆಧಾರ ದೊರಕಿದ ಹಾಗಾಯಿತು.

ಭರತ ವರ್ಷದ ವಿಸ್ತಾರ 9000 ಯೋಜನ ಎಂದು ಹೇಳಿರುವುದು ಜಂಭೂ ದ್ವೀಪದ ಒಂಭತ್ತು ವರ್ಷಗಳಲ್ಲಿ ಒಂದಾದ ಭರತವರ್ಷವನ್ನು ಕುರಿತು. 9000 ಯೋಜನ ಎಂದರೆ ಸುಮಾರು 60,000 ಮೈಲಿ. ಇದು ಜಂಬೂದ್ವೀಪದ ದಕ್ಷಿಣ ದಂಚಿನಿಂದ ಕಿಂಪುರುಷ ವರ್ಷದ ಮೇರೆಯಾದ ಬೃಹತ್ ಹಿಮಾಲಯದವರೆಗೆ ಇರುವ ವಿಸ್ತಾರವಾದ ಪ್ರದೇಶ. ಇದು ಋಷ್ಯಾಶ್ರಮಗಳಿಂದ ನಿಬಿಡವಾಗಿದೆ.

ಇದುವರೆಗೆ ಹೇಳಿದ ಜಂಬೂದ್ವೀಪ, ಭರತವರ್ಷ, ಭರತಖಂಡ, ದಂಡಕಾರಣ್ಯ (ಭಾರತದೇಶ) ಎಂಬ ಭೂಭಾಗಗಳ ಕಲ್ಪನೆಯನ್ನು ಮನಸ್ಸಿಗೆ ತಂದುಕೊಳ್ಳಬೇಕಾದರೆ, ಈಗಿನ ಭೂಗೋಳ ಪಾಠವನ್ನು ಮರೆತು, ಜಂಬೂದ್ವೀಪದ ನೆಲಗಟ್ಟಿನ ಚಿತ್ರವನ್ನು ನೋಡಿ ಮನದಟ್ಟು ಮಾಡಿಕೊಳ್ಳಬೇಕು.

ಕೇವಲ 60000 ಮೈಲಿ ದೂರದಲ್ಲಿರುವ ನಿಜವಾದ ಹಿಮಾಲಯ ಪರ್ವತ ಈಗಿನ ದೂರದರ್ಶಕಗಳಿಗೇಕೆ ಕಾಣುತ್ತಿಲ್ಲ ಎಂದು ಈಗಿನವರು ಕೇಳುವುದು ಸಹಜವೇ, ಆದರೆ, ಭರತಖಂಡದ ರಚನೆಗೂ, ಉಳಿದ ಜಂಬೂದ್ವೀಪ ವಿಭಾಗಗಳ ರಚನೆಗೂ ಮಿಶ್ರಣಗಳಲ್ಲಿ ವ್ಯತ್ಯಾಸವುಂಟೆಂದು ಪುರಾಣಗಳಿಂದ ತಿಳಿದುಬರುವುದು. ಅತಿಸೂಕ್ಷ್ಮ ವಸ್ತುಗಳಿಂದ ಹಿಡಿದು ಅತಿ ಸ್ಥೂಲವಸ್ತುಗಳವರೆಗೆ ಎಲ್ಲವೂ ಸತ್ವ, ರಜ, ತಮಗಳೆಂಬ ಮೂರು ಮೂಲ ವಸ್ತುಗಳ ವಿವಿಧ ಮಿಶ್ರಣಗಳಿಂದಲೇ ಆಗಿರುವುದು ನಿಜ ; ಆದರೆ, ಮಿಶ್ರಣಗಳ ವ್ಯತ್ಯಾಸದ ದೆಸೆಯಿಂದ ನಮಗೆ ಜಂಬೂ ದ್ವೀಪದ ಇತರ ಭಾಗಗಳೂ, ಅದನ್ನು ಸುತ್ತುವರಿದಿರುವ ಸಪ್ತದ್ವೀಪ ಸಪ್ತ ಸಾಗರಗಳೂ, ಈ ಎಲ್ಲಾ ಸನ್ನಿವೇಶಗಳಿಗೆ ಕೇಂದ್ರವಾದ ಮೇರು ಪರ್ವತವೂ ನಮ್ಮ ಸಾಮಾನ್ಯ ದೃಷ್ಟಿಗೆ ಗೋಚರಿಸುವುದಿಲ್ಲ. ಯೋಗಿಗಳು ಯೋಗ ದೃಷ್ಟಿಯಿಂದ ನೋಡಬಲ್ಲರು; ಆ ಪ್ರದೇಶಗಳಿಗೆ ಹೋಗಿಯೂ ಬರಬಲ್ಲರು. ಇಲ್ಲಿ ಪ್ರಸಕ್ತವಾಗಿರುವ 'ಭೂಗೋಳ ವರ್ಣನಂ' ಎಂಬ ಗ್ರಂಥವನ್ನು ರಚಿಸಿದ ಶ್ರೀ ವಾದಿರಾಜ ಗುರುಸಾರ್ವಭೌಮರು ಯೋಗ ಸಿದ್ಧರಲ್ಲಿ ಅತ್ಯಂತ ಶ್ರೇಷ್ಠವರ್ಗದವರು. ಅವರು ತಮ್ಮ ಸೂಕ್ಷ್ಮ ಶರೀರ ದಿಂದ ಹದಿನಾಲ್ಕು ಲೋಕಗಳಲ್ಲಿಯೂ ಸಂಚಾರ ಮಾಡಿಬಂದವರು. ಅವರ ಈ ಪ್ರವಾಸವನ್ನು ಕುರಿತು ಅವರಿಂದಲೇ ಹುಟ್ಟುಮೂಕನ ಬಾಯಿಂದ ಹೇಳಿಸಿದ ವೃಂದಾವನಾಖ್ಯಾನವೆಂಬ ಗ್ರಂಥದಲ್ಲಿ ವಿವರಗಳನ್ನು ನೋಡಬಹುದು. ನಾವು ನೆನಪಿನಲ್ಲಿಡಬೇಕಾದ ಸಂಗತಿಯೆಂದರೆ, ಶ್ರೀ ವಾದಿರಾಜರು ಯಾವುದೋ ಪುರಾಣ ಕಾಲದವರಲ್ಲ. ಸುಪ್ರಸಿದ್ಧ ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನ ಕಾಲದಲ್ಲಿದ್ದವರು.

ಭರತಖಂಡ ಮತ್ತು ಭಾರತ ದೇಶಗಳನ್ನು ಕುರಿತು ಇದುವರೆಗೆ ನಾವು ತಿಳಿದ ಸಂಗತಿಗಳಿಂದ ಗ್ರಹಿಸಬೇಕಾದ ಮತ್ತೊಂದು ಮುಖ್ಯಾಂಶವಿದೆ. ಶಾಸ್ತ್ರೋಕ್ತ ಕರ್ಮಗಳನ್ನಾಚರಿಸುವಾಗ ಸಂಕಲ್ಪವನ್ನು ಸಾಮಾನ್ಯವಾಗಿ ತಪ್ಪಾದ ರೀತಿಯಲ್ಲಿ ಹೇಳುವುದು ಕಂಡುಬರುತ್ತದೆ. " ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ "

ಎಂದು ಹೇಳುವುದು ಸರಿಯಲ್ಲ. ಜಂಬೂದ್ವೀಪೇ, ಭರತವರ್ಷೇ, ಭರತಖಂಡೇ, ದಂಡಕಾರಣ್ಯೇ " ಎಂದು ಹೇಳುವುದು ಸರಿಯಾದ ಕ್ರಮ].

ಮರ್ಯಾದಾದ್ರಿ ಪ್ರಮಾಣೇನ ಸಹವರ್ಷತ್ರಿಕೇಪಿ ಚ ॥೨೦೩॥
ಯೋಜನಾನಾಂ ನವನವ ಸಹಸ್ರಾಣಿ ಪ್ರಕಲ್ಪಯೇತ್ ।
ಏವಮುತ್ತರ ತೋಽಪ್ಯೂಹ್ಯಾವರ್ಷಸಂಖ್ಯಾವಿವೇಕಿಭಿಃ ॥೨೦೪॥
ಅರಭ್ಯಮೇರೋರ್ನಾಭಿಂತು ನಚೇದ್ದಿ ಶಿದಿಶೀರಿತಾ ।
ಭಗ್ನಾ ಪಂಚಾಶತ್ಸಹಸ್ರ ಮಾನಸಂಖ್ಯಾಭವಿಷ್ಯತಿ ॥೨೦೫॥
ತ್ರಯೋವಿಂಶತ್ಸಹಸ್ರೇತಾ ಯದಿಳಾವೃತಭೂರಿಯಂ ।
ಚತುರ್ದಿಕ್ಷ್ವಾಮೇರುನಾಭೇರಾಸೀಮಾದ್ರಿಚತುಷ್ಟಯಾತ್ ॥೨೦೬॥
ಸಪ್ತವಿಂಶತಿ ಸಾಹಸ್ರ ಯೋಜನಾ ಏವತದ್ಬಹಿಃ ।
ಇಮೇಚಪರಿತೋ ವರ್ಷಾಭವೇಯುಸ್ತದಯಂಕ್ರಮಃ ॥೨೦೭॥
ನಚೇತ್ಪಂಚಾಶತ್ಸಹಸ್ರ ಯೋಜನತ್ವಂ ಕಥಂಭವೇತ್ ॥

ಮರ್ಯಾದಾ ಪರ್ವತಗಳ ಅಳತೆಗಳನ್ನೂ ಕೂಡಿಸಿಕೊಂಡು ಒಂದೊಂದು ವರ್ಷದ ವಿಸ್ತಾರವೂ 9000 ಯೋಜನವೆಂದು ಯೋಜಿಸಬೇಕು. ಇದೇ ರೀತಿಯಾಗಿ ಉತ್ತರದ ಮೂರು ವರ್ಷಗಳಲ್ಲಿಯೂ ಕೂಡ ಬುದ್ಧಿವಂತರು ಊಹಿಸಬೇಕು. ಹಾಗಲ್ಲದ ಪಕ್ಷದಲ್ಲಿ ಮೇರುನಾಭಿಯಿಂದ ಜಂಬೂದ್ವೀಪದ ಅಂಚಿನವರೆಗೆ 50,000 ಯೋಜನವೆಂಬ ಲೆಕ್ಕಾಚಾರ ಕೆಡುತ್ತದೆ. ಮೇರುನಾಭಿಯಿಂದ ಸೀಮಾಪರ್ವತದ ವರೆಗೆ ಇಳಾವೃತವರ್ಷದ ವಿಸ್ತಾರವು 23,000 ಯೋಜನವಾದರೆ, ಉಳಿಯುವುದು 27,000 ಯೋಜನ ಮಾತ್ರ. ಅದರಲ್ಲಿ ಎರಡು ಸೀಮಾಪರ್ವತಗಳ 4000 ಯೋಜನವನ್ನು ಕಳೆದರೆ, ಉಳಿಯುವ 23000 ಯೋಜನದಿಂದ 9000 ಯೋಜನದ ಮೂರುವರ್ಷಗಳಿಗೆ ಹಂಚಿಕೆಯಾಗುವುದಿಲ್ಲ, ಅಥವ 4000 ಸಾವಿರವನ್ನು ಕೂಡಿಸಿದರೆ ಅದು 31,000 ವಾಗುವುದು. $(31+23)=540000$ ಎಂದಾಗುವುದರಿಂದ 50000 ಎಂಬ ಲೆಕ್ಕಾಚಾರ ತಪ್ಪಾಗುವುದು.

[ಮೇರುಪರ್ವತದ ಬುಡದ ವಿಸ್ತಾರವು 16,000 ಯೋಜನವಾದುದರಿಂದ, ಅದರ ಕೇಂದ್ರದಿಂದ (ನಾಭಿಯಿಂದ) ಸುತ್ತಲೂ 8000 ಯೋಜನವಾಗುವುದು.

ಅಲ್ಲಿಂದ ಹೊರಗೆ ಇಳಾವೃತವರ್ಷದ ವಿಸ್ತಾರವು 9000 ಯೋಜನವೆಂತಲೂ ಒಂದೊಂದು ಕಡೆಯೂ ಅದರೊಳಗಿನ ಅವಷ್ಟಂಭ ಪರ್ವತ ಪರಿಸ್ತರಣ ಪರ್ವತ ಮತ್ತು ನಿಷಧದಂತಹ ಸೀಮಾಪರ್ವತದ (2+2+2) 6000 ಯೋಜನಗಳನ್ನೂ ಕೂಡಿಸಿ ಮೇರು ಕೇಂದ್ರದಿಂದ ಇಳಾವೃತ ವರ್ಷದ ವಿಸ್ತಾರವು 8+9+6= 23000 ಯೋಜನವೆಂದು ಕೆಲವರು ಯೋಚಿಸಿದುದು ತಪ್ಪೆಂದು ಶ್ರೀವಾದಿರಾಜ ಗುರುರಾಜರು ಇಲ್ಲಿ ತಿಳಿಸಿದ್ದಾರೆ. ಏಕೆಂದರೆ, ಹರಿವರ್ಷ, ಕಿಂಪುರುಷ ಮತ್ತು ಭರತ ವರ್ಷಗಳ ವಿಸ್ತಾರವು 9×3)=27000 ಯೋಜನವೆಂದೂ, ಹೇಮ ಕೂಟ ಮತ್ತು ಹಿಮಾಲಯಗಳ ವಿಸ್ತಾರವು (2+2)=4000 ಯೋಜನವೆಂದು ಪರಿಗಣಿಸಿದಾಗ ಅದು (27+4) 31000 ವಾಗುವುದು. 50000 ಕ್ಕೆ ಬದಲಾಗಿ (23+31)=54000 ವೆಂದಾಗಿ, ಅದು ತಪ್ಪುಲೆಕ್ಕವಾಗುವುದು.]

ಪ್ರತೀಚ್ಯಾಂಕೇತುಮಾಲಾಖ್ಯೋ ವರ್ಷೋಽಪ್ಯೇಕಉದಾಹೃತಃ ॥೨೦೮॥
ಆಯಾಮಪ್ಯಪರಾಂಬೋಧಿ ಪರ್ಯಂತಸ್ಸಮುದಾಹೃತಃ ।

ಅತ್ರಾಪಿ ಭಗವಾನ್ವಿಷ್ಣುಃ ಕಾಮನಾಮಾ ಮಹಾಪ್ರಭುಃ ॥
ಕಂದರ್ಪಕೋಟಿ ಸದೃಶ ಸೌಂದರ್ಯಾದ್ಭುತ ಮೂರ್ತಿಮಾನ್ ॥೨೦೯॥

ಪುರುಷಾಯುರಹೋರಾತ್ರ ಸಂಖ್ಯಯ್ಯಾಕತಿಭಿಃ ಕೃತಾ ।
ದ್ವಾಸಪ್ತತಿ ಸಹಸ್ರಾಖ್ಯಾ ತಾವತೀಭಿಃ ಪ್ರಜಾಪತೇಃ ॥೨೧೦॥

ಸುತಾಭಿಸ್ಸಹಿತಾವರ್ಷ ನಾಯಿಕಾಭಿಸ್ಸದಾರಮಾ ।
ಉಪಾಸ್ತೇ ಸ್ವಪತಿಂ ದಿವ್ಯಮಂತ್ರಜ್ಞಾ ಮಂತ್ರಪೂರುಷಂ ॥೨೧೧॥

ಪವನಃಪಾರಿಯಾತ್ರಶ್ಚೇತ್ಯತ್ರಾಪಿ ದ್ವೌಗಿರೀಕ್ರಮಾತ್ ।
ಇಮೌಚ ಪೂರ್ವದಿಕ್ಸ್ಥದ್ರಿ ಸಮಾನಾಯಾಮ ವಿಸ್ತರಾ ॥೨೧೨॥

ಅಯಂಚವರ್ಷೋಗಿರಿಭಿರ್ವಿಭಕ್ತಃ ಪೂರ್ವವತ್ತ್ರಿಧಾ ।
ಜಂಬೂದ್ವೀಪಮಲಂಕರ್ತುಂ ನಿರ್ಮಾತ್ರಾಹರಿಣೈವಹಿ ॥೨೧೩॥

ಪೂರ್ವದಿಕ್ಕಿನಲ್ಲಿ ಭದ್ರಾಶ್ವದಂತೆ ಪಶ್ಚಿಮದಕಡೆ ಕೇತುಮಾಲಾ ಎಂಬ ಒಂದೇ ವರ್ಷವಿರುವುದು. ಅದು ಪಶ್ಚಿಮ ಸಮುದ್ರದವರೆಗೆ ವಿಸ್ತರಿಸಿದೆ. ಭದ್ರಾಶ್ವದಲ್ಲಿ ಹಯಗ್ರೀವ ಮೂರ್ತಿಯಂತೆ, ಇಲ್ಲಿ ಕಾಮನೆಂಬ ಹೆಸರುಳ್ಳವನಾಗಿ, ಕೋಟಿಕೋಟಿ ಮನ್ಮಥರನ್ನು ಮೀರಿಸುವ ಸೌಂದರ್ಯ ಉಳ್ಳವನಾಗಿದ್ದಾನೆ. ಮಾನವರ ಆಯು

ರ್ಷಾನದ ಅಹೋರಾತ್ರಿಗಳಿಗೆ ಯಜಮಾನಿಯರೆನಿಸಿದ, ಪ್ರಜಾಪತಿಯ ಪುತ್ರಿಯ ರಾದ 72,000 ಮಂದಿ ತಮ್ಮ ಪ್ರಮುಖರೊಂದಿಗೆ ಇಲ್ಲಿರುವವರು. ಇವರಿಂದೊ ಡಗೂಡಿ ದಿವ್ಯಮಂತ್ರಗಳ ರಹಸ್ಯಗಳನ್ನು ಬಲ್ಲ ರಮಾದೇವಿಯು ಮಂತ್ರಮೂರ್ತಿ ಯಾದ ತನ್ನ ಪತಿಯನ್ನು ಈ ವರ್ಷದಲ್ಲಿ ಪೂಜಿಸುತ್ತಿದ್ದಾಳೆ. ಪೂರ್ವದಿಕ್ಕಿನ ಎರಡು ಅಧಿಕ ಪರ್ವತಗಳಂತೆ ಅದೇ ಅಳತೆಗಳುಳ್ಳ ಇಲ್ಲಿಯೂ (ಪವನ, ಪಾರಿಯಾತ್ರ ಎಂಬೀ ಎರಡು ಪರ್ವತಗಳು ನಿರ್ಮಿತವಾಗಿವೆ. ಭದ್ರಾಶ್ವದಂತೆ ಇದೂ ಮೂರು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಹೀಗೆ ನಿರ್ಮಿಸಿರುವವನು ಜಂಬೂದ್ವೀಪದ ಅಲಂ ಕಾರವನ್ನು ಗಮನದಲ್ಲಿಟ್ಟ ಶ್ರೀ ಹರಿಯೇ.)

[ ಶ್ರೀವಾದಿರಾಜರ ಚಿತ್ರಕಲಾನೈಪುಣ್ಯವು ಇಲ್ಲಿಕಂಡುಬರುವುದಲ್ಲದೆ, ಮಹಾ ವಿಷ್ಣುವು ಕಲೆಗಾರರಿಗೆಲ್ಲಾ ಮಹಾಗುರುವೆಂದು ಅವರು ಹೇಳಿರುವುದು ಗಮನಾರ್ಹ]

ನೀಲಾದ್ರೇರುತ್ತರೇ ಭಾಗೇ ರಮ್ಯಕೋವರ್ಷ ಇಷ್ಯತೇ ।
ಅಯಂಚನವಸಾಹಸ್ರ ಯೋಜನೈರ್ವಿಸ್ತೃತಃಕಿಲ ॥೨೧೪॥

ಅತ್ರಾಪಿ ಮನುನಾಮತ್ಸ್ಯರೂಪೀ ನಾರಾಯಣಃ ಪ್ರಭುಃ ।
ಸದಾನಿಷೇವ್ಯತೇ ವೈವಸ್ವತಾಖ್ಯೇನ ಸಹರ್ಷಿಭಿಃ ॥೨೧೫॥

ಮರ್ಯಾದಾ ಪರ್ವತೋಸ್ಯಾಪಿ ಶ್ವೇತಾಖ್ಯೋ ವರ್ತತೇಕಿಲ ।
ಪೂರ್ವಾಪರಾಬ್ಧಿ ಪರ್ಯಂತೋ ದಶಾಂಶೋನಶ್ಚನೀಲತಃ ॥೨೧೬॥

ವಿಸ್ತಾರೇನೀಲಸದೃಶಸ್ತಸ್ಯಾಪ್ಯುತ್ತರ ಭಾಗತಃ ।
ಹಿರಣ್ಮಯಾಖ್ಯೋವರ್ಷೋಸ್ಯ ಸೀಮಾದ್ರಿಶ್ಶೃಂಗವಾನ್ಕಿಲ ॥೨೧೭॥

ಪೂರ್ವಾಪರಾಬ್ಧಿ ಪರ್ಯಂತೋ ವಿಸ್ತೃತೌಶ್ವೇತಸಮ್ಮಿತಃ ।
ದಶಾಂಶೋನಃಶ್ವೇತಗಿರೇಸ್ಸಿದ್ಧರ್ಷಿಗಣ ಸೇವಿತಃ ॥೨೧೮॥

ವರ್ಷೇಸ್ಮಿನ್ನ ಪ್ಯಕೂಪಾರ ರೂಪಿಣಂ ಪುರುಷೋತ್ತಮಂ ।
ಅರ್ಯಮಾಸೇವತೇ ನಿತ್ಯಂ ಸಹತದ್ವರ್ಷಪೂರುಷೈಃ ॥೨೧೯॥

ತತಉತ್ತರಕುರ್ವಾಖ್ಯೋ ವರ್ಷೋದೇವರ್ಷಿಸೇವಿತಃ ।
ಉತ್ತರಾರ್ಣವ ಪರ್ಯಂತೋ ವರ್ಷೋಯಂಚ ನಿಗದ್ಯತೇ ॥೨೨೦॥

ಅಯಂಚನವಸಾಹಸ್ರ ಯೋಜನೈರ್ವಿಸ್ತೃತಃ ಕಿಲ ।
ಸೀಮಾದ್ರಿಭಿಃಸಹೈಷಾಂಚ ಮಾನಂ ದಕ್ಷಿಣವರ್ಷವತ್ ॥೨೨೧॥

ಅತ್ರಯಜ್ಞವರಾಹಾಖ್ಯೋ ಹರಿರ್ನಾರಾಯಣಃ ಪ್ರಭುಃ ।
ಧರಣ್ಯಾಕುರುಭಿಸ್ಸಾರ್ಧಂ ಸರ್ವದೋಪಾಸ್ಯತೇ ಕಿಲ ॥೨೨೨॥

ಹರಿವರ್ಷಾದಯೋವರ್ಷಾ ದಕ್ಷಿಣಸ್ಯಾಂ ದಿಶಿತ್ರಯಃ ।
ಉತ್ತರಸ್ಯಾಂದಿಶಿ ತಥಾರಮ್ಯಕಾದ್ಯಸ್ತ್ರಯಸ್ಮೃತಾಃ ॥೨೨೩॥

ಜಂಬೂದ್ವೀಪದಲ್ಲಿ, ನಡುವಿನ ಇಳಾವೃತ ವರ್ಷದ ಉತ್ತರದ ವೇರೆಯಾಗಿರುವುದು ನೀಲಪರ್ವತ. ಅದರ ಉತ್ತರ ಬಾಗದಲ್ಲಿ ರಮ್ಯಕ ವರ್ಷವಿದೆ. ಇದೂ ಕೂಡ 9000 ಯೋಜನ ವಿಸ್ತಾರವುಳ್ಳದ್ದಾಗಿದೆ. ಈ ವರ್ಷದಲ್ಲಿ ಲೋಕೇಶ್ವರನಾದ ಶ್ರೀಮನ್ನಾರಾಯಣನು ಮತ್ಸ್ಯರೂಪದಿಂದ ಇದ್ದು, ವೈವಸ್ವತ ಮನು ಚಕ್ರವರ್ತಿಯಿಂದ ಪೂಜೆಯನ್ನು ಕೈಗೊಳ್ಳುತ್ತಿದ್ದಾನೆ. ಅಲ್ಲಿನ ಋಷಿಗಳೂ ಪೂಜಿಸಿ ಧನ್ಯರಾಗುತ್ತಾರೆ. ರಮ್ಯಕ ವರ್ಷಕ್ಕೆ ವೇರೆಯಾಗಿರುವುದು ಶ್ವೇತಪರ್ವತ ಇದು ಪೂರ್ವ ಪಶ್ಚಿಮ ಸಮುದ್ರಗಳವರೆಗೆ ನೀಳವಾಗಿದ್ದು, ನೀಲ ಪರ್ವತಕ್ಕಿಂತ ಶೇಕಡ 10 ಪಾಲು ಉದ್ದದಲ್ಲಿ ಕಡಿಮೆಯಾಗಿದೆ. ಅಗಲವು ಮಾತ್ರ ನೀಲ ಪರ್ವತದಷ್ಟೇ ಇದೆ. ಈ ಶ್ವೇತ ಪರ್ವತದ ಉತ್ತರ ಭಾಗದಲ್ಲಿ ಹಿರಣ್ಮಯ ವರ್ಷವಿದೆ. ಇದರ ಸೀಮಾ ಪರ್ವತವು ಶೃಂಗವಾನ್ ಎಂಬುದು. ಅದೂ ಕೂಡ ಪೂರ್ವ ಪಶ್ಚಿಮ ಸಮುದ್ರಗಳನ್ನು ತಾಕಿಕೊಂಡಿದ್ದು ಶ್ವೇತ ಪರ್ವತಕ್ಕಿಂತ ಉದ್ದದಲ್ಲಿ ದಶಾಂಶ ಕಡಿಮೆಯಾಗಿದೆ. ಅಗಲದಲ್ಲ ಒಂದೇ ಆಗಿದೆ. ಇಲ್ಲಿ ಸಿದ್ಧರೂ, ಋಷಿ ಮುನಿಗಳೂ ನೆಲೆಸಿದ್ದಾರೆ. ಈ ವರ್ಷದಲ್ಲಿ ಕೂರ್ಮರೂಪದಿಂದಿರುವ ಪುರುಷೋತ್ತಮನು ಪಿತೃಗಣ ಮುಖ್ಯನಾದ ಅರ್ಯಮನಿಂದಲೂ, ಇತರ ನಿವಾಸಿಗಳಿಂದಲೂ ಪೂಜಿತನಾಗಿದ್ದಾನೆ. ಈ ವರ್ಷದ ಉತ್ತರದಲ್ಲಿ ಉತ್ತರ ಕುರುವರ್ಷವೆಂಬುದಿದೆ. ಇಲ್ಲಿ ದೇವರ್ಷಿಗಳು ನೆಲೆಸಿದ್ದಾರೆ. ಈ ವರ್ಷದ ವಿಸ್ತಾರವು ಉತ್ತರ ಸಮುದ್ರದ ವರೆಗೆ 9000 ಯೋಜನವಾಗಿದೆ. ಸೀಮಾ ಪರ್ವತಗಳಿಂದ ಸಹಿತವಾಗಿ ಈ ಉತ್ತರದ ಮೂರು ವರ್ಷಗಳು ವಿಸ್ತಾರದಲ್ಲಿ ದಕ್ಷಿಣದ ಮೂರು ವರ್ಷಗಳಂತೆಯೇ ಇವೆ. ಇಲ್ಲಿ ಸರ್ವಸ್ವಾಮಿಯಾದ ಶ್ರೀಮನ್ನಾರಾಯಣನು ಯಜ್ಞವರಾಹ ರೂಪದಿಂದಿರುವನು. ಈ ಶ್ರೀ ಹರಿಯನ್ನು ವರ್ಷದ ಇತರ ಪ್ರಜೆಗಳೊಡಗೂಡಿ ಭೂದೇವಿಯು ನಿತ್ಯವೂ ಪೂಜಿಸುವಳು. ಈ ರೀತಿಯಾಗಿ ಹರಿವರ್ಷ, ಕಿಂಪುರುಷ ವರ್ಷ, ಭರತ ವರ್ಷಗಳು ಜಂಬೂದ್ವೀಪದ ದಕ್ಷಿಣ ಭಾಗದಲ್ಲಿರುವಂತೆ, ರಮ್ಯಕ, ಹಿರಣ್ಮಯ ಮತ್ತು ಉತ್ತರ ಕುರುವರ್ಷಗಳು ಉತ್ತರ ಭಾಗದಲ್ಲಿರುವುವು.



"Ground plan of Jambudvip.

"The Meru at the centre and the nine Varshas Illavrita (Middle) Bhadrasva (east) Ketumala (West) Ramyaka, Hiranmaya and Uttara Kuru (north) ; Harivarsha, Kimpurasha Varsha and Bharatha Varsha (South) ;



''Bharata Khanda–oblique directions of satellites.

[ಜಂಬೂದ್ವೀಪ ಮತ್ತು ಅದರ ನವವರ್ಷಗಳನ್ನು ಕುರಿತು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ, ಈಗಿನ ಭೂಗೋಳ ಪಾಠವನ್ನು ಸ್ವಲ್ಪಕಾಲ ಮರೆತುಬಿಡಬೇಕು. ಈಗಿನವರಂತೆ ಭೂಗೋಳವೆಂಬುದು ಸೌರವ್ಯೂಹದ ಒಂದು ಗ್ರಹ. ಆದರೆ; ಪುರಾಣಗಳ ಪ್ರಕಾರ ಇಲ್ಲಿ ಹೇಳಿರುವುದು ಸ್ಥಿರವಾದ, ಅತಿ ವಿಶಾಲವಾದ ಭೂಮಂಡಲದ ವಿಚಾರ. ಐದು ಕೋಟಿ ಯೋಜನ ವಿಸ್ತಾರವಾದ ಸಪ್ತದ್ವೀಪ ಸಪ್ತಸಾಗರಗಳಲ್ಲಿ, ನಟ್ಟ ನಡುವೆ ಒಂದು ಲಕ್ಷ ಯೋಜನ ವಿಸ್ತಾರವಾಗಿ ಒಂದು ಬುಟ್ಟಿಯಂತೆ ಆಕಾರ ಹೊಂದಿರುವುದು ಜಂಬೂದ್ವೀಪ. ಅದರ ದಕ್ಷಿಣ ಭಗದಲ್ಲಿ ದಕ್ಷಿಣ ಸಮುದ್ರ, ಪರ್ಯಂತ ಹಬ್ಬಿರುವುದು ಭರತವರ್ಷ, ಇದರ ವಿಸ್ತಾರ 9000 ಯೋಜನ (60 ಸಾವಿರ ಮೈಲಿ ಅಥವ 96 ಸಾವಿರ ಕಿಲೋಮೀಟರ್.) ಈ ವರ್ಷದ ಎತ್ತರವಾದ ಅಂಚಿನಲ್ಲಿ ಒಂದು ಚೆಂಡಿನಂತೆ ಅಂಟಿಕೊಂಡಿರುವುದು ಭರತಖಂಡ. ಇದರಲ್ಲಿ ದಂಡಕಾರಣ್ಯವೆಂಬುದು ನಮಗೆ ತಿಳಿದಿರುವ ಭಾರತದೇಶ.

ಜಂಬೂ ದ್ವೀಪದ ವಿಭಾಗಗಳನ್ನು ಕುರಿತು ಪೂರ್ವಸಮುದ್ರ, ಉತ್ತರ ಸಮುದ್ರ ಮೊದಲಾಗಿ ಹೇಳಿರುವುದು ಜಂಬೂ ದ್ವೀಪದ ಸುತ್ತಲೂ ವೃತ್ತಾಕಾರವಾಗಿರುವ ಅತ್ಯಂತ ವಿಸ್ತಾರವಾದ ಲವಣ ಸಮುದ್ರ ಹಿಂದೂ ಸಾಗರ, ಅಟ್ಲಾಂಟಿಕ್ ಸಾಗರ, ಶಾಂತ ಸಾಗರ ಮತ್ತು ಉತ್ತರ ಸಮುದ್ರಗಳಲ್ಲ.]

ಪೂರ್ವಾಪರಾಬ್ಧಿ ಪರ್ಯಂತಾಸ್ಸರ್ವೇಽಪ್ಯಾಯಾ ಮತಃಸ್ಮೃತಾಃ ।
ಹಿಮಾದ್ರೇಃ ಪೂರ್ವಭಾಗೇಸ್ಯಃ ಕೈಲಾಸಾಖ್ಯೋ ಗಿರಿಃ ಕಿಲ ॥೨೨೪॥

ಉಮಯಾ ಸಹಿತೋ ದೇವೋ ಯತ್ರಾಸ್ತೇ ತ್ರ್ಯಂಬಕಃ ಪ್ರಭುಃ ।
ಕರವೀರಾಭಿಧಸ್ತಸ್ಯ ಪಶ್ಚಾದ್ಭಾಗೇಽಪರೋ ಗಿರಿಃ ॥೨೨೫॥

ತತಃ ಶೃಂಗವತಃ ಪಾರ್ಶ್ವದ್ವಯೇ ದ್ವೌ ಪರ್ವತೌ ಕಿಲ ।
ತ್ರಿಶೃಂಗಮಕರೌ ನಾಮ್ನಾ ಸಿದ್ಧರ್ಷಿಗಣಸಂಕುಲೌ ॥೨೨೬॥

ಏತೈರ್ಗಿರಿವರೈರ್ಮೇರುಶ್ಚತುರ್ಭುಜ ಇವಾಬಭೌ ।
ಜಂಬೂದ್ವೀಪೋ ಮಹಾನೇಷಃ ನವವರ್ಷ ಸಮನ್ವಿತಃ ॥೨೨೭॥

ಮಧ್ಯೇಹೇಮಾದ್ರಿಣಾ ಯುಕ್ತೋ ಮಧ್ಯಮದ್ವೀಪ ಉಚ್ಯತೇ ।
ಲಕ್ಷಯೋಜನ ವಿಸ್ತಾರಸ್ಸೋಽಯಂ ದ್ವೀಪಉದಾಹೃತಃ ॥೨೨೮॥

ಹಿಂದೆ ಹೇಳಿದ ಉತ್ತರದ ಮೂರು ಮತ್ತು ದಕ್ಷಿಣದ ಮೂರು ವರ್ಷಗಳು ಲವಣ ಸಮುದ್ರದ ಪೂರ್ವಭಾಗ ಮತ್ತು ಪಶ್ಚಿಮ ಭಾಗಗಳನ್ನು ಮುಟ್ಟಿಕೊಂಡಿವೆ.

ಭಾರತವರ್ಷದ ಮೇರೆಯಾದ ಹಿಮವತ್ಪರ್ವತದ ಪೂರ್ವದಂಚಿನ ಬಳಿಯಲ್ಲಿ ಕೈಲಾಸವೆಂಬ ಇನ್ನೊಂದು ಪರ್ವತವಿದೆ. ಉಮಾಪತಿಯಾದ ಮುಕ್ಕಣ್ಣಶಿವನು ಇಲ್ಲಿ ಸುಪ್ರತಿಷ್ಠಿತನಾಗಿದ್ದಾನೆ. ಇದೇ ಹಿಮವತ್ಪರ್ವತದ ಪೂರ್ವದಂಚಿನ ಇನ್ನೊಂದು ಕಡೆಯಲ್ಲಿ ಕರವೀರವೆಂಬ ಪರ್ವತವಿದೆ. ಇದರಂತೆ, ಉತ್ತರಭಾಗದ ಶೃಂಗವಾನ್ ಪರ್ವತದ ಪೂರ್ವದಂಚಿನ ಎಡಬಲ ಪಕ್ಕಗಳಲ್ಲಿ ತ್ರಿಶೃಂಗ ಮತ್ತು ಮಕರ ಎಂಬ ಎರಡು ಪರ್ವತಗಳಿವೆ, ಇಲ್ಲೆಲ್ಲಾ ಸಿದ್ಧರೂ, ಋಷಿಗಳೂ ತುಂಬಿದ್ದಾರೆ. ಈಗ ಹೇಳಿದ ನಾಲ್ಕು ಪರ್ವತಗಳ ಸನ್ನಿವೇಶಗಳ ಕಾರಣದಿಂದ ಮೇರು ಪರ್ವತರಾಜನು ಚತುರ್ಭುಜಗಳುಳ್ಳವನಂತೆ ಶೋಭಿಸುತ್ತಿದ್ದಾನೆ.

ಈ ರೀತಿಯಾಗಿ, ಜಂಬೂದ್ವೀಪವೆಂಬುದು ನವ ವರ್ಷಗಳಿಂದ ಕೂಡಿ ಮಹತ್ತರವಾಗಿದೆ. ಸಪ್ತದ್ವೀಪಗಳಲ್ಲಿ ಇದು ಮಧ್ಯದ ದ್ವೀಪವಾಗಿದೆ. ಇದರ ನಟ್ಟ ನಡುವೆ ಸುವರ್ಣಮಯವಾದ ಮೇರುಪರ್ವತವಿದೆ. ಈ ದ್ವೀಪದ ವಿಸ್ತಾರ, ಒಂದು ಲಕ್ಷಯೋಜನ.

[ ಭಾರತದೇಶದ ಕಿರು ಹಿಮಾಲಯದಲ್ಲಿ ಕೈಲಾಸ ಶಿಖರವಿದೆ; ಭಾರತದೇಶದ ಮೇರೆಯಾದ ಬೃಹತ್ ಹಿಮಾಲಯದಲ್ಲೊಂದು ಕೈಲಾಸ ಶಿಖರವಿದೆ; ಈ ಪರ್ವತದ ಪೂರ್ವದಂಚಿನ ಬಳಿಯಲ್ಲಿ ಕೈಲಾಸ ಪರ್ವತವೆಂಬುವೇ ಒಂದು ಪ್ರತ್ಯೇಕವಾಗಿದೆ. ಈ ಎಲ್ಲಾ ಕಡೆಗಳಲ್ಲಿಯೂ ಶಿವಪಾರ್ವತಿಯರು ಸನ್ನಿಹಿತರಾಗಿದ್ದು, ಲೋಕದ ಯೋಗಕ್ಷೇಮ ನಿರ್ವಾಹಕರಾಗಿದ್ದಾರೆ; ಮೇರು ಪರ್ವತದ ಬುಡದ ಪ್ರದೇಶದಲ್ಲಿದ್ದುಕೊಂಡು ಸಂಕರ್ಷಣ ಮೂರ್ತಿಯನ್ನು ಅರ್ಚಿಸುತ್ತಿದ್ದಾರೆ.

ಅಲ್ಲಲ್ಲಿ ಪರ್ವತಗಳನ್ನು ಕುರಿತು ಹೇಳುವಾಗ, ಸಿದ್ಧರು, ಋಷಿಗಳು ಮುಂತಾದವರಿರುವರೆಂದು ಹೇಳಿರುವುದನ್ನು ಎಲ್ಲಾ ಕಡೆಗಳಿಗೂ ಅನ್ವಯಿಸಿ ತಿಳಿಯಬೇಕು ].

### ಸಪ್ತದ್ವೀಪ – ಸಪ್ತ ಸಾಗರಗಳು

ಪರಿತಸ್ತ್ವಿಮಂ ದ್ವೀಪಂ ಕ್ಷಾರೋದಾರ್ಣವ ಈರಿತಃ ।
ಲಕ್ಷಯೋಜನ ವಿಸ್ತಾರಸ್ಸೋಯಂ ದಿಶಿದೀಶೀರಿತಃ ॥೨೨೯॥

ಪ್ಲಕ್ಷದ್ವೀಪಃ ತತಃ ಪಶ್ಚಾತ್ ದ್ವಿಗುಣಃ ಸಿದ್ಧಸೇವಿತಃ ।
ತಾವಾನಿಕ್ಷು ಸಮುದ್ರಶ್ಚ ಸ್ಯಾತ್ತೇ ತತ್ಪರಿತಃ ಕಿಲ ॥೨೩೦॥

ಶಾಲ್ಮಲಾಖ್ಯೋ ಮಹಾನ್ ದ್ವೀಪಸ್ತತೋಪಿ ದ್ವಿಗುಣಃ ಕಿಲ ।
ಸುರಾಸಿಂಧುಶ್ಚ ತನ್ಮಾನಸ್ತಂ ದ್ವೀಪಂ ಪರಿತಃ ಕಿಲ ॥೨೩೧॥

ತತಃ ಪಶ್ಚಾತ್ಕುಶದ್ವೀಪಃ ಪೂರ್ವಸ್ಮಾದ್ದ್ವಿಗುಣಃ ಸ್ಮೃತಃ ।
ಸ ಚ ಸರ್ಪಿ ಸಮುದ್ರೇಣ ಸ್ವಮಾನೇನ ಸಮಾವೃತಃ ॥೨೩೨॥

ತತಃ ಕ್ರೌಂಚಾಭಿಧೋ ದ್ವೀಪೋ ದ್ವಿಗುಣೋ ಘೃತಸಾಗರಾತ್ ।
ಸ ಚ ದ್ವೀಪಃ ಸ್ವಪ್ರಮಾಣ ದಧ್ಯಾಖ್ಯೋದಧಿನಾವೃತಃ ॥೨೩೩॥

ಪೂರ್ವದ್ವೀಪಾದ್ದ್ವಿಗುಣಿತೋ ದ್ವೀಪಶ್ಶಾಕಾಭಿಧೋ ಮಹಾನ್ ।
ಮಾನೇನ ತಾವತಾಯುಕ್ತಃ ಕ್ಷೀರಾಂಬೋಧಿಸ್ತತಃ ಪರಂ ॥೨೩೪॥

ಪುಷ್ಕರಾಖ್ಯೋ ಮಹಾನ್ ದ್ವೀಪಃ ಪೂರ್ವಸ್ಮಾದ್ದ್ವಿಗುಣಃ ಸ್ಮೃತಃ ।
ಶುಭೋದಕ ಸಮುದ್ರೋಪಿ ತಾವನ್ಮಾನಸ್ತತೋ ಬಹಿಃ ॥೨೩೫॥

ಹೇಮಭೂಮಿಃ ತತಃ ಪಶ್ಚಾದ್ವಜ್ರಲೇಪ ಉದಾಹೃತಃ ।
ಲೋಕಾಲೋಕಗಿರಿಶ್ಚಾಂತೇ ಭೂಮಿರೇತಾವತೀ ಕಿಲ ॥೨೩೬॥

ಜಂಬೂದ್ವೀಪವನ್ನು ಸುತ್ತುವರಿದು ಇರುವುದು ಲವಣ ಸಮುದ್ರವೆನಿಸುವುದು. ಎಲ್ಲಾ ದಿಕ್ಕುಗಳಲ್ಲಿಯೂ ಒಂದು ಲಕ್ಷಯೋಜನ ವಿಸ್ತಾರವಾಗಿರುವುದು. ಅದರ ನಂತರ, ಆ ಸಮುದ್ರವನ್ನು ಸುತ್ತುವರಿದಿರುವುದು ಪ್ಲಕ್ಷದ್ವೀಪ; ಅದರ ವಿಸ್ತಾರ ಲವಣಸಮುದ್ರದ ಎರಡರಷ್ಟು; ಎಂದರೆ, ಎರಡು ಲಕ್ಷಯೋಜನ. ಸಿದ್ಧಪುರುಷರು ಇಲ್ಲಿರುವರು. ಅದರಷ್ಟೇ ಅಗಲವುಳ್ಳದ್ದು ಇಕ್ಷು ಸಮುದ್ರ. ಅದು ಪ್ಲಕ್ಷದ್ವೀಪದ ಸುತ್ತಲೂ ಇರುವುದು. ಅದರ ಎರಡರಷ್ಟು, ಎಂದರೆ, ನಾಲ್ಕು ಲಕ್ಷ ಯೋಜನ ಅಗಲವಿರುವ ದೊಡ್ಡದಾದ ಶಾಲ್ಮಲ ದ್ವೀಪ ಅದರ ಸುತ್ತಲೂ ಇರುವುದು. ಅದರ ಸುತ್ತಲೂ ಸಮಾನ ವಿಸ್ತಾರವುಳ್ಳ ಸುರಾ ಸಮುದ್ರವಿದೆ. ಅನಂತರ ಇರುವುದು ಕುಶದ್ವೀಪ. ಅದರ ವಿಸ್ತಾರ, ಒಳಗಿನ ಶಾಲ್ಮಲ ದ್ವೀಪದ ಎರಡರಷ್ಟು, ಎಂದರೆ, ಎಂಟುಲಕ್ಷ ಯೋಜನ. ಸಮಾನ ಅಗಲವುಳ್ಳ ಸರ್ಪಿ (ಘೃತ) ಸಮುದ್ರದಿಂದ ಅದು ಸುತ್ತುವರಿಯಲ್ಪಟ್ಟಿದೆ. ಅದರ ಹೊರಗೆ ಇರುವುದು ಕ್ರೌಂಚವೆಂಬ ಹೆಸರಿನ ದ್ವೀಪ. ಅದರ ಅಗಲ, ಘೃತ ಸಾಗರದ ಎರಡರಷ್ಟು – 16 ಲಕ್ಷ ಯೋಜನ.

ಅಷ್ಟೇ ಅಗಲದ ದಧಿಸಮುದ್ರದಿಂದ ಆ ದ್ವೀಪವು ಆವರಿಸಲ್ಪಟ್ಟಿದೆ. ಕ್ರೌಂಚ ದ್ವೀಪದ ಎರಡರಷ್ಟು ವಿಸ್ತಾರವಾಗಿ ಸುತ್ತಲೂ ಇರುವುದು ಶಾಕದ್ವೀಪ; ಇದು ಬಹಳ ವಿಸ್ತಾರವಾದುದು; ಅಗಲ 32 ಲಕ್ಷ ಯೋಜನ. ಅಷ್ಟೇ ವಿಸ್ತಾರವಾದ ಕ್ಷೀರ ಸಮುದ್ರವು ಅದನ್ನು ಸುತ್ತುವರಿದು ಹಬ್ಬಿದೆ. ಇದರ ಎರಡರಷ್ಟು ವಿಸ್ತಾರ ವಾಗಿ, ಅಂದರೆ, 64 ಲಕ್ಷ ಯೋಜನವಿಸ್ತಾರವಾಗಿರುವುದು ಪುಷ್ಕರ ದ್ವೀಪ, ಅಷ್ಟೇ ವಿಸ್ತಾರವಾಗಿ ಸುತ್ತಲೂ ನಿರ್ಮಿತವಾಗಿರುವುದು ಶುದ್ಧೋದಕ (ಶುಭೋದಕ) ಸಮುದ್ರ. ಅದರ ಹೊರಗೆ ಹೇಮ (ಸ್ವರ್ಣ) ಭೂಮಿ; ಅದರ ಸುತ್ತಲೂ ವಜ್ರಲೇಪ (ವಜ್ರಭೂಮಿ). ಎಲ್ಲವನ್ನೂ ಆವರಿಸಿ ಸುತ್ತುಗಟ್ಟಿ ನಿಂತಿರುವುದು ಲೋಕಾಲೋಕ ಪರ್ವತ. ಇಲ್ಲಿಯವರೆಗೆ ಭೂಮಿಯ ವಿಸ್ತಾರ. ಇದು 7.7 ಕೋಟಿ, ಚಿಲ್ಲರೆ ಎಂದು ಹಿಂದೆಯೇ ತಿಳಿಸಲಾಗಿದೆ.

[ಇಲ್ಲಿ ಆಧುನಿಕರು ಗಮನಿಸಬೇಕಾದ–ಮುಖ್ಯಾಂಶ–ಪುರಾಣಗಳಲ್ಲಿ ತಿಳಿಸಿರುವ ಸಪ್ತದ್ವೀಪ ಸಪ್ತಸಾಗರಗಳು ವರ್ತುಲಾಕಾರವಾಗಿದ್ದು ಒಂದನ್ನೊಂದು ಸುತ್ತುವ ರಿದು ಇರುವುವು; ಬಹಳ ವಿಸ್ತಾರವಾಗಿರುವುವು. ಜಂಬೂದ್ವೀಪದ ಭರತ ವರ್ಷವು ಮಾತ್ರ ಕರ್ಮಭೂಮಿಯಾಗಿರುವುದು; ಎಂದರೆ, ಇಲ್ಲಿ ಆಚರಿಸಿದ ಪುಣ್ಯ ಪಾಪಗಳು ಫಲಕಾರಿಗಳಾಗಿ, ಜನ್ಮ ಜನ್ಮಾಂತರಗಳಿಗೆ ಕಾರಣವಾಗುವುವು. ವಿಸ್ತಾರ ವಾದ ಭೂಮಂಡಲದ ಇತರ ಭಾಗಗಳು ಭೋಗಭೂಮಿಗಳು ಎಂದು ಪ್ರಸಿದ್ಧ ವಾಗಿವೆ. ಸ್ವರ್ಗಾದಿ ಲೋಕಗಳಲ್ಲಿ ಅನುಭವಿಸಿದ ವಿಶೇಷ ಸುಖಗಳಲ್ಲದೆ, ಇನ್ನೂ ಅನುಭವಿಸಲು ಯೋಗ್ಯವಾದ ಸುಖಭೋಗಗಳಿಗಾಗಿ ಈ ಪ್ರದೇಶಗಳು ಮೀಸಲಾ ಗಿವೆ; ಇದರಂತೆ ದುಷ್ಕರ್ಮ ಭೋಗಗಳೂ ಕೂಡ.

ಇಳಾವೃತವರ್ಷದ ಮೇರುಮಂದರ ಪರ್ವತದ ಮೇಲೆ ಬೃಹದಾಕಾರದ ಜಂಬೂ ವೃಕ್ಷವಿದೆ. ಇದರ ದಪ್ಪ, ಎತ್ತರ 100 ಯೋಜನ; ವಿಸ್ತಾರ– 1100 ಯೋಜನ. ಇದರ ಒಂದೊಂದು ಫಲವೂ ಪರ್ವತ ಶಿಖರದಂತಿದ್ದು, ಕೆಳಗೆ ಬಿದ್ದಾಗ ಒಸರಿ ಹರಿಯುವ ರಸವು ಜಾಂಬೂ ನದಿಯಾಗಿದೆ. ಇದರ ದಡಗಳಲ್ಲಿ ಅಲ್ಲಿನ ಮಾರುತನಿಂದ ಒಣಗಿದ ಹಣ್ಣಿನ ರಸವು ಬಂಗಾರವಾಗಿ ಪರಿಣಮಿಸುವುದು. ಇದಕ್ಕೆ ಜಾಂಬೂನದ ಎಂದು ಹೆಸರು. ಈ ಚಿನ್ನವನ್ನು ತಮ್ಮ ಆಭರಣಗಳಿಗಾಗಿ ದೇವತೆ ಗಳು ಬಳಸುತ್ತಾರೆ. ಈ ಕಾರಣದಿಂದ ಭೂಮಂಡಲದ ನಟ್ಟನಡುವಿನ ಭಾಗಕ್ಕೆ ಜಂಬೂದ್ವೀಪ ಎಂಬ ಹೆಸರು ಬಂದಿದೆ.



"Seven islands and seven oceans, surrounded by Loka-aloka Parvata".

ಬೃಹದಾಕಾರದ ಪ್ಲಕ್ಷವೃಕ್ಷಗಳು (ಔದುಂಬರ ಅಥವ ಅತ್ತಿಮರ) ಹೇರಳವಾಗಿರುವುದು ಪ್ಲಕ್ಷದ್ವೀಪ. ಇಲ್ಲಿ ಗರುಡ ಮೊದಲಾದ ಪಕ್ಷಿವಿಶೇಷಗಳು ಹೆಚ್ಚಾಗಿರುವುವು. ಸಿದ್ಧ ಸುಖಪುರುಷರೂ ಇದ್ದಾರೆ. ಇದರಂತೆ ಶಾಲ್ಮಲ (ಭೂರುಗದ ಹತ್ತಿ) ವೃಕ್ಷಗಳಿಂದ ತುಂಬಿರುವುದು ಶಾಲ್ಮಲ ದ್ವೀಪ. ಕುಶದ್ವೀಪದಲ್ಲಿ ಕೆಂಡದ ಕಾಂತಿಯಿಂದ ಜ್ವಲಿಸುವ ಕುಶಸ್ತಂಭಗಳು (ದರ್ಭೆಹುಲ್ಲಿನ ಸಮೂಹಗಳು) ಬಹು ಎತ್ತರವಾಗಿ ಬೆಳೆದು ನಿಂತಿವೆ. ಇದು ಬಹು ಪವಿತ್ರವಾದ ದ್ವೀಪ. ಕ್ರೌಂಚಪರ್ವತವಿರುವುದು ಕ್ರೌಂಚದ್ವೀಪ. ಸಸ್ಯಸಮೃದ್ಧಿ ಇರುವುದು ಶಾಕದ್ವೀಪ. ಪುಷ್ಕರದ್ವೀಪದ ಸರೋವರಗಳಲ್ಲಿ ಸುವರ್ಣ ಕಮಲಗಳು ಬೆಳೆಯುವುದರಿಂದ ದ್ವೀಪಕ್ಕೆ ಆ ಹೆಸರು. ಅಲ್ಲಿ ಒಂದು ಬೃಹದಾಕಾರದ ಸುವರ್ಣ ಕಮಲ ಕರ್ಣಿಕೆಯ ಮೇಲೆ ಮಂಡಿಸಿರುವ ಬ್ರಹ್ಮದೇವನನ್ನು ಸೇವಿಸಿ ದೇವತೆಗಳು ಧನ್ಯರಾಗುವರು.

ಪ್ಲಕ್ಷ, ಮೊದಲಾದ ಐದು ದ್ವೀಪಗಳು ಏಳೇಳು ಪರ್ವತಗಳಿಂದಲೂ, ಏಳೇಳು ಪ್ರಸಿದ್ಧ ನದಿಗಳಿಂದಲೂ ಅಲಂಕೃತವಾಗಿ, ಏಳೇಳು ವರ್ಷಗಳಾಗಿ ವಿಂಗಡಿಸಲ್ಪಟ್ಟಿವೆ. ಅಲ್ಲೆಲ್ಲಾ ವರ್ಷಾಧಿಪತಿಗಳಿದ್ದು ತಮ್ಮ ಪ್ರಜೆಗಳ ಯೋಗಕ್ಷೇಮ ನಿರ್ವಾಹಕರಾಗಿದ್ದಾರೆ. ಪುಷ್ಕರ ದ್ವೀಪದ ನಟ್ಟನಡುವೆ, ಭೂಮಂಡಲಕ್ಕೆ ತೊಡಿಸಿದ ಬೃಹದಾಕಾರದ ಬಳೆಯಂತಿರುವ ಮಾನಸೋತ್ತರ ಪರ್ವತದಿಂದ ಆ ದ್ವೀಪವು ಎರಡು ವರ್ಷಗಳಾಗಿ ಮಾತ್ರ ವಿಭಾಗಿಸಲ್ಪಟ್ಟಿದೆ.

ಇಕ್ಷು, ಸುರಾ ಮೊದಲಾದ ಸಮುದ್ರಗಳ ಉದಕಗಳು ಕೇವಲ ಕಬ್ಬಿನ ರಸ, ಮದಿರ, ಘೃತ, ದಧಿ ಮತ್ತು ಕ್ಷೀರಗಳಿಂದ ತುಂಬಿವೆಯೆಂದು ತಿಳಿಯಬಾರದು. ಆದರೆ, ಅಪೇಕ್ಷಿಸಿದರೆ ಆಯಾ ರಸಗಳು ಒದಗಿಬರುವುವು, ಅಷ್ಟೇ. ಕ್ಷೀರಸಮುದ್ರದಲ್ಲಿ ಹಾಲಿನ ಗಟ್ಟಿಯಾದ ಸ್ತಂಭವೇ ಇದ್ದು, ಅದರ ಮೇಲೆ ಶ್ವೇತದ್ವೀಪವೆಂಬ ಶ್ರೀಹರಿಯ ಮಂದಿರವು ವಿಸ್ತೃತವಾಗಿದೆ.]

ಇತ್ಥಂಮೇರೋಃ ಪೂರ್ವತಶ್ಚ ಮೇರೋರ್ದಕ್ಷಿಣತೋಪಿಚ ।
ಪಶ್ಚಾನ್ಮೇರೋರುದೀಚ್ಯಾಂಚ ಭೂರೇವಂ ಸರ್ವತಃ ಸ್ಥಿತಾ ॥೨೩೭॥

ಇಯಂಭೂಸ್ಸರ್ವಜೀವಾನಾಂ ಸರ್ವಾಭೀಷ್ಟ ಫಲಪ್ರದಾ ।
ದೇವಾನಾಂಚ ಮುನೀನಾಂಚ ಪಿತೄಣಾಂ ಚಕ್ರವರ್ತಿನಾಂ ॥೨೩೮॥

ಮಾನುಷಾಣಾಂಚ ಸುಖದಾ ನಾರಾಯಣಮನಃಪ್ರಿಯಾ ।
ಸರ್ವಸಸ್ಯೋದ್ಭವಾ ಪುಣ್ಯಾ ಸರ್ವೌಷಧಿಸಮಾಕುಲಾ ॥೨೩೯॥
ಪುಣ್ಯಾರಣ್ಯಾಶ್ರಮೋಪೇತಾ ಪುಣ್ಯನದ್ಯುಪಬೃಂಹಿತಾ ।
ಶ್ರೇಯಸ್ಕರೀ ತೃಪ್ತಿಕರೀ ರತ್ನಗರ್ಭಾವಸುಂಧರಾ ॥೨೪೦॥
ಧಾತ್ರೀಕಿಲೇಯಂ ಜಗತಸ್ಸೇಯಂಸರ್ವಸಹಾ ಕಿಲ ।
ವರಾಹಸ್ಯಾಂಕಪರ್ಯಂಕಾ ಮಹತೀ ರಾಜತೇತರಾಂ ॥೨೪೧॥

ಹಿಂದೆ ಹೇಳಿದ ರೀತಿಯಲ್ಲಿ ಮೇರುಪರ್ವತದ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಲ್ಲಿ ಸುತ್ತಲೂ ಭೂಮಂಡಲವು ಪ್ರಸರಿಸಿದೆ. ಈ ಭೂಮಿಯು ಸಕಲ ಜೀವರಿಗೂ ಅವರವರ ಇಷ್ಟಾರ್ಥಗಳನ್ನು ಒದಗಿಸುವುದಾಗಿದೆ. ದೇವತೆಗಳಿಗೆ ಋಷಿಗಳಿಗೆ, ಪಿತೃಗಳಿಗೆ, ಚಕ್ರವರ್ತಿಗಳಿಗೆ ಮತ್ತು ಮಾನವರಿಗೆ ಸುಖದಾಯಕಳಾದ ಈ ಭೂಮಿಯ ಒಡತಿಯು (ಭೂದೇವಿಯು) ಶ್ರೀಮನ್ನಾರಾಯಣನಿಗೆ ಪ್ರೀತಿಪಾತ್ರಳಾಗಿದ್ದಾಳೆ. ಈ ಪುಣ್ಯ ಭೂಮಿಯಲ್ಲಿ ಎಲ್ಲಾ ವಿಧವಾದ ಸಸ್ಯಜಾತಿಗಳೂ ಬೆಳೆಯುತ್ತವೆ. ಔಷಧಿಯ ಸಾಮಗ್ರಿಗಳಾದ ಸಸ್ಯಗಳೂ ಧಾತುಗಳೂ ಇಲ್ಲಿ ಸಮೃದ್ಧವಾಗಿವೆ. ಪುಣ್ಯ ಸಂಪಾದನೆಗೆ ಅನುಕೂಲವಾದ ಋಷ್ಯಾಶ್ರಮಗಳುಳ್ಳ ಅರಣ್ಯಗಳು ಇಲ್ಲಿ ತುಂಬಿವೆ; ಪುಣ್ಯ ನದಿಗಳು ಬಹು ಸಂಖ್ಯೆಯಲ್ಲಿ ಈ ಭೂಮಿಯಲ್ಲಿ ಪ್ರವಹಿಸುತ್ತವೆ. ಭೂದೇವಿಯು ಸುಖ ಸಮೃದ್ಧಿಗಳಿಂದ ಜೀವಿಗಳಿಗೆ ತೃಪ್ತಿಯನ್ನುಂಟು ಮಾಡುವವಳಾಗಿದ್ದಾಳೆ. ಭೂಗರ್ಭದಲ್ಲಿ ಜನರು ಅಪೇಕ್ಷಿಸುವ ರತ್ನಗಳು ತುಂಬಿವೆ. ಸಕಲ ಐಶ್ವರ್ಯಗಳಿಂದಲೂ ತುಂಬಿರುವುದರಿಂದ ಭೂಮಿಗೆ ವಸುಂಧರಾ ಎಂದು ಹೆಸರುಂಟು. ಈ ಭೂಮಿದೇವಿಯು ಜೀವಿಗಳನ್ನು ಪೋಷಿಸುವುದರಿಂದ 'ಧಾತ್ರೀ' ಅಥವಾ ಭೂಮಾತೆ ಎನಿಸಿದ್ದಾಳೆ; ಸಕಲವನ್ನೂ ಸಹಿಸುವಳೆಂದೂ ಪ್ರಸಿದ್ಧಳಾಗಿದ್ದಾಳೆ. ಇಂತಹ ಭೂಮಾತೆಯು ಶ್ರೀವರಾಹಮೂರ್ತಿಯ ತೊಡೆಯ ಮೇಲೆ ಕುಳಿತು ರಾರಾಜಿಸುತ್ತಿದ್ದಾಳೆ.

[ ತಿರುಪತಿ ಮಹಾಕ್ಷೇತ್ರದ ಸ್ವಾಮಿ ಪುಷ್ಕರಿಣೀ ತೀರದಲ್ಲಿ ವರಾಹಪರ್ಯಂಕಾರೂಢಳಾದ ಭೂದೇವಿಯನ್ನು ನೋಡಬಹುದು, ವಿಶ್ವದ ಲೋಕಗಳ ದೃಷ್ಟಿಯಿಂದ ನೋಡಿದಾಗ, ಭೂಭಾರವನ್ನು ಕ್ರಮವಾಗಿ, ಅಷ್ಟದಿಗ್ಗಜಗಳು, ಆದಿಶೇಷ, ವಾಯು, ಕೂರ್ಮ, ಆದಿಶಕ್ತಿ–ಇವರು ಹೊತ್ತಿರುವುದು ಕಂಡು ಬರುವುದು. ಈ ಎಲ್ಲ



"Kala Chakra - 'The Time Wheel'- Sun's path around the Meru Centre."

ವನ್ನೂ ಹೊತ್ತು ನಿಂತಿರುವವನು ಆದಿವರಾಹ. ಶ್ವೇತವರಾಹ ಕಲ್ಪದಲ್ಲಿ, ಮುಳುಗಿದ್ದ ಭೂಮಿಯನ್ನು ಮೇಲೆ ತಂದಿಟ್ಟವನು ವರಾಹಮೂರ್ತಿ. ಇನ್ನೊಮ್ಮೆ, ಹಿರಣ್ಯಾಕ್ಷನ ತುಳಿತದಿಂದ ಕುಸಿದಿದ್ದ ಭಾರತದೇಶದ ಪಶ್ಚಿಮ ಕರಾವಳೀ ಪ್ರದೇಶವನ್ನು ತನ್ನ ಕೋರೆದಾಡೆಯಿಂದ ಮೇಲಕ್ಕೆತ್ತಿ, ಆ ದೈತ್ಯನು ಅಪಹರಿಸಿ ಕೊಂಡು ಹೋಗಿದ್ದ ಭೂದೇವಿಯನ್ನು ಮೇಲೆತ್ತಿಕೊಂಡು ಬಂದು ತಿರುಪತಿ ಬೆಟ್ಟದ ಮೇಲೆ ಕುಳಿತಿರುವುದೂ ಆ ವರಾಹದೇವನೇ !].

## ಕಾಲಚಕ್ರ

ಘಟಿಕಾಹೋರಾತ್ರಪಕ್ಷ ಮಾಸರ್ತ್ವಯನ ರೂಪತಃ ।
ಸಂವತ್ಸರಾತ್ಮರೂಪೇಣ ಬೃಹತಾಚೋಪಲಕ್ಷಿತಂ ॥೨೪೨॥

ಮಹಾಕಾಲಂ ಸ್ವಗತಿಭಿಃ ಪ್ರಮಾಲ್ಲಕ್ಷಯಿತುಂ ನೃಣಾಂ ।
ನವಗ್ರಹಾಣಾಂ ರಾಶೀನಾಂ ತಾರಾಣಾಂ ಸಪ್ತಯೋಗಿನಾಂ ॥೨೪೩॥

ಗಂಧರ್ವಾಣಾಂಚ ಸಿದ್ಧಾನಾಂ ನೃಣಾಂ ಪುಣ್ಯಕೃತಾಮಪಿ ।
ಸ್ಫುರದ್ರತ್ನ ವಿಮಾನಾನಿ ಪರಿತಃ ಸ್ಥಾನಭೇದತಃ ॥೨೪೪॥

ಸದಾಧರ್ಮಂ ಚ ಹರಿಣಾ ಕೃತಮಾಶ್ಚರ್ಯಕರ್ಮಣಾಂ ।
ರತ್ನೋಜ್ವಲ ಸ್ಫುರದ್ರತ್ನಮಯೀಭಿಃ ಪರಿತೋದಿಶಂ ॥೨೪೫॥

ಸ್ಫುರಚ್ಚಕ್ರಸ್ಯಧಾರಾವನ್ಮಂಡಲಾಕೃತಿಭಿಃಕ್ರಮಾತ್ ।
ಉತ್ತರೋತ್ತರ ಸಂಸ್ಥಾಭಿರ್ಬಹುಸಾಹಸ್ರ ಯೋಜನಾನ್ ॥೨೪೬॥

ಮಧ್ಯೇಮಧ್ಯೇ ಯಥಾಯೋಗ್ಯಾನ್ದೇಶಾನಂತರಿತಾನಪಿ ।
ಸ್ವಭಾಸಾಭಾಸಯಂತೀಭಿರ್ಧಾರಾಭಿರ್ಬಹುಭಿಃಸದಾ ॥೨೪೭॥

ನವಗ್ರಹಾಣಾಂ ನವಭೀ ರಾಶೀನಾಂ ಚತಥೈಕಯಾ ।
ನಕ್ಷತ್ರಾಣಾಮಪರಯಾ ಮುನೀನಾಂ ಚತಥಾನ್ಯಯಾ ॥೨೪೮॥

ಧಾರಣಾಯದ್ವಾದಶಧಾ ಧಾರಾಶ್ಚಾಸ್ಯ ಪರಿಸ್ತೃತಾಃ ।
ಇದಂಚ ಕಾಲಚಕ್ರಾಖ್ಯ ನಾಮ್ನಾ ವಿದ್ವದ್ಭಿರೀರಿತಂ ॥೨೪೯॥

ನಿತ್ಯವಸ್ತುಗಳಲ್ಲಿ ಒಂದಾದ ಮಹಾಕಾಲವನ್ನು ಘಳಿಗೆ, ಹಗಲು, ರಾತ್ರಿ, ಪಕ್ಷ, ಮಾಸ, ಋತು, ಅಯನ ಮತ್ತು ವರ್ಷಗಳೆಂಬ ರೂಪಭೇದಗಳಿಂದ ಮಾನವರು ಗಣಿಸಲು ಅನುಕೂಲವಾಗುವಂತೆ, ನವಗ್ರಹಗಳು, ರಾಶಿಗಳು, ತಾರೆಗಳು, ಸಪ್ತರ್ಷಿಗಳು, ಗಂಧರ್ವ-ಸಿದ್ಧ-ಪುಣ್ಯಪುರುಷರುಗಳ ದಿವ್ಯರತ್ನ ಖಚಿತ ವಿಮಾನಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಸುತ್ತಲೂ ಚಕ್ರಾಕಾರವಾಗಿ ತಿರುಗಲು ಆಧಾರ ರೂಪವಾಗಿರುವಂತೆ ಮಹಾಮಹಿಮನಾದ ಶ್ರೀ ಹರಿಯು ಯೋಜನೆಯನ್ನು ಅಳವಡಿಸಿರುವನು. ಆ ವರ್ತುಲಗಳು ನಿಜವಾದ ಚಕ್ರಾಕಾರದ ಪಟ್ಟಿಗಳ ಮೇಲೆ ರಥಗಳು ಚಲಿಸಿದರೆ ಹೇಗೋ ಹಾಗೆ ಕಾಣುತ್ತವೆ. ಆದರೆ, ಆ ವರ್ತುಲ ಪಥಗಳು ಮೇಲೆ-ಕೆಳಗೆ ಎಂಬಂತೆ ಅಂತರಗಳುಳ್ಳವುಗಳಾಗಿ, ಸಹಸ್ರ ಸಹಸ್ರ ಯೋಜನಗಳಷ್ಟು ದೂರದೂರದಲ್ಲಿವೆ. ಅವು ರತ್ನ ಕಾಂತಿಯಿಂದ ದಿಕ್ಕು ದಿಕ್ಕುಗಳನ್ನು ಬೆಳಗುತ್ತವೆ. ಈ ಪಥಗಳಲ್ಲಿ ಮುಖ್ಯವಾದುವು ನವಗ್ರಹಗಳ ಒಂಭತ್ತು ಪಥಗಳು, ನಕ್ಷತ್ರಗಳ ಪಥವೊಂದು, ರಾಶಿಗಳ ಪಥವೊಂದು, ಸಪ್ತರ್ಷಿಗಳ ಪಥವೊಂದು, ಹೀಗೆ ಒಟ್ಟು ಹನ್ನೆರಡು. ಈ ಬಗೆಯ ಆಕಾಶಕಾಯಗಳ ಚಲನೆಗಳಿಗೆ ಯೋಗ್ಯವಾದ ಯೋಜನೆಯನ್ನು ಕಾಲಚಕ್ರವೆಂದು ಬಲ್ಲ ವಿದ್ವಜ್ಜನರು ಹೇಳುತ್ತಾರೆ.

[ವಸ್ತು ಎಂದ ಮಾತ್ರಕ್ಕೆ ಪಂಚೇಂದ್ರಿಯಗಳಿಗೆ ಗೋಚರವಾಗುವ ಜಡವಸ್ತುವೆಂದು ಮಾತ್ರ ತಿಳಿಯಬಾರದು. ಮನಸ್ಸಿನಿಂದ ಗ್ರಹಿಸಿ ಹೆಸರಿಸಬಹುದಾದ ಯಾವುದನ್ನಾದರೂ ವಸ್ತುವೆಂದೇ, ಶಾಸ್ತ್ರಗಳಲ್ಲಿ ಗ್ರಹಿಸುವರು. ಈ ದೃಷ್ಟಿಯಿಂದ, ಕಾಲವೆಂಬುದು ಮನೋಗ್ರಾಹ್ಯವಾದ ವಸ್ತು ; ಘಟನೆಗಳ ಹಿಂದು ಮುಂದುಗಳನ್ನು ನಾವು ತಿಳಿಯುವುದು ಇದರ ಸಹಾಯದಿಂದಲೇ. ಇಂತಹ ಕಾಲವೆಂಬ ಪದಾರ್ಥವನ್ನು ಆಕಾಶಕಾಯಗಳ ಚಲನಗಳಿಂದ ಮಾನವರು ತಿಳಿದು ವ್ಯವಹರಿಸಲು ಅನುಕೂಲವಾಗಿದೆ. ಆಕಾಶ ಕಾಯಗಳ ಗತಿಗಳನ್ನು ನಿಯಂತ್ರಿಸುವ ಯೋಜನೆಯನ್ನು ಕಲ್ಪಿಸಿರುವವನು ಮಹಾಮಹಿಮನಾದ ಶ್ರೀಹರಿ.

ಆಕಾಶ ಕಾಯಗಳಲ್ಲಿ, ನಕ್ಷತ್ರಗಳ ಪಂಗಡಕ್ಕೆ ಸೇರಿದುವು 27 ನಕ್ಷತ್ರಗಳ ಗುಂಪುಗಳು ಮತ್ತು ದ್ವಾದಶ ರಾಶಿಗಳ ಗುಂಪುಗಳು ; ಸಪ್ತಋಷಿಗಳು ಮತ್ತು

ಧ್ರುವನಕ್ಷತ್ರಗಳೂ ಈ ಪಂಗಡಕ್ಕೆ ಸೇರಿದವುಗಳೇ ಆಗಿವೆ. ಸೂರ್ಯನೆಂಬ ಆಕಾಶ ಕಾಯವು ಈಗಿನವರು ಹೇಳುವಂತೆ ಮಧ್ಯಮ ದರ್ಜೆಯ ನಕ್ಷತ್ರವಲ್ಲ. ಅದು ಗ್ರಹ ನಕ್ಷತ್ರಗಳ ರಾಜ. ಸೃಷ್ಟಿಯಲ್ಲಿ ಮತ್ತು ಲೋಕಗಳ ರಕ್ಷಣೆಯಲ್ಲಿ ಸೂರ್ಯನ ಪಾತ್ರ ಬಹುದೊಡ್ಡದು. ಸೂರ್ಯಕಿರಣಗಳಿಂದ ನಾನಾ ಬಗೆಯ ಕಾರ್ಯಗಳ ನಿರ್ವಹಣೆಯಾಗುವುದರಿಂದ ಅವನಿಗೆ ಸಹಸ್ರಾಂಶುವೆಂದು ಹೆಸರು. ನಕ್ಷತ್ರಗಳು ಏಕ ವಿಧವಾದ ಕಿರಣ ಪ್ರಭಾವಗಳಿಂದ ಕೂಡಿರುವುವು. ನಕ್ಷತ್ರಗಳಂತೆಯೇ ಇರುವ ಸಿದ್ಧರೇ ಮೊದಲಾದವರ ದಿವ್ಯಯಾನಗಳನ್ನು ತಾರೆಗಳೆಂದು ಕರೆಯುವರು].

> ಹೇಮಂತ ಶಿಶಿರೈಕ್ಯೇನ ಪಂಚಾರಮಿತಿ ಕೀರ್ತಿತಂ ।
> ಮಾಸದ್ವಾದಶ ರೂಪತ್ವಾತ್ ದ್ವಾದಶಾರಮೀರಿತಂ ॥೨೫೦॥
> ಕಾಲಂ ಪ್ರವರ್ತಯೇದ್ಯಸ್ಮಾತ್ತತ್ತನ್ನಾಮ್ನಾ ಚ ಕೀರ್ತಿತಂ ।
> ದ್ವಾದಶಾರಮಿತಿಪ್ರಾಹ ಪಂಚಾರೇ ಚಕ್ರ ಇತ್ಯಪಿ ॥೨೫೧॥

ಋತುಗಳು ಆರೆಂದು ಪರಿಗಣಿಸುವುದು ರೂಢಿಯಾದರೂ ಹೇಮಂತ ಮತ್ತು ಶಿಶಿರ ಋತುಗಳನ್ನು ಒಂದಾಗಿ ಭಾವಿಸುವ ಪರಿಪಾಠವೂ ಇರುವುದರಿಂದ, ಅವು ಐದು ಎಂದ ಹಾಗಾಯಿತು. ಈ ಋತುಗಳು ಚಕ್ರದಂತೆ ತಿರುಗುತ್ತಿರುವುವು, ದಿವಸ, ಪಕ್ಷ, ಮಾಸ, ಅಯನ, ವರ್ಷ ಎಂಬ ಕಾಲದ ಅಂಶಗಳೂ ಹೀಗೆಯೇ ಪರಿವರ್ತಿತವಾಗುತ್ತಿರುವುದರಿಂದ ಕಾಲ ಸೂಚಕ ಯೋಜನೆಯನ್ನೂ ಚಕ್ರವೆಂದು ಕರೆಯುತ್ತಾರೆ. ಐದು ಋತುಗಳ ದೃಷ್ಟಿಯಿಂದ ಈ ಕಾಲಚಕ್ರಕ್ಕೆ ಐದು ಅರಗಳಿರುವುವೆಂದು ಹೇಳುವರು. ಹನ್ನೆರಡು ಮಾಸಗಳ ದೃಷ್ಟಿಯಿಂದ ದ್ವಾದಶಾರವೆಂದೂ ಹೇಳುವರು, ಹೀಗೆ ಪಂಚಾರ, ದ್ವಾದಶಾರಗಳ ಕಾಲಚಕ್ರವೆಂಬ ವರ್ಣನೆಯು ವಾಮನ ಸೂಕ್ತದಲ್ಲಿ ಕಂಡು ಬರುತ್ತದೆ:

[ಈ ಕಾಲಚಕ್ರವೆಂಬುದು ಗ್ರಹನಕ್ಷತ್ರಾದಿಗಳ ಚಲನೆಗಳಿಗೆ ಅನುಕೂಲವಾಗುವಂತೆ ಬೇರೆ ಬೇರೆ ವರ್ತುಲಾಕಾರದ ಪಟ್ಟಿಗಳನ್ನುಳ್ಳ ಬೃಹದ್ಯಂತ್ರದಂತಿದೆ. ಈ ಪಟ್ಟಿಗಳು ಮೇರುವಿಗೆ ಸಮೀಪವಾಗಿಯೂ, ದೂರದೂರವಾಗಿಯೂ, ಮೇಲಿನ ಸ್ತರಗಳಲ್ಲಿಯೂ, ಕೆಳಗಿನ ಸ್ತರಗಳಲ್ಲಿಯೂ ಇರುತ್ತವೆ. ಇದು ಒಂದು ತೆರೆದ ಛತ್ರಿಯಂತೆ ಮೇಲೆ ಧ್ರುವಮಂಡಲದಿಂದ, ಕೆಳಗೆ ಸೂರ್ಯಮಂಡಲ, ರಾಹುಮಂಡಲಗಳವರೆಗೆ ಇರತಕ್ಕದ್ದಾಗಿದೆ; ಬಹುಕೋಟಿಯೋಜನ ವಿಸ್ತಾರವಾಗಿದೆ.]

ಆರಭ್ಯಮೇರು ಮೂರ್ಧಾನಮಾಚೋಚ್ಚಧೃವಮಂಡಲಂ ।
ಯೋಜನಾನಾಂ ಷಷ್ಟಿಲಕ್ಷೈಃ ಷಲ್ಲಕ್ಷೈರಯುತೈರಪಿ ॥೨೫೩॥

ಉಚ್ಛ್ರಿತಂ ಶಿಂಶುಮಾರಾಖ್ಯ ಹರಿಣಾನಂದಮೂರ್ತಿನಾ ।
ಕುಂಡಲೀಕೃತ ಮಧ್ಯೇನ ಭಾಸಿತಾಧೋಮುಖಶ್ರೀಯಾ ॥೨೫೪॥

ಊರ್ಧ್ವೀಕೃತೋಚ್ಚಪುಚ್ಛೇನ ಸಹಸ್ರಾದಿತ್ಯತೇಜಸಾ ।
ಸ್ವಚಕ್ರವದಿದಂ ಚಕ್ರಂ ಪರಿತೋಭ್ರಾಮ್ಯತೇ ಕಿಲ ॥೨೫೫॥

ಮೇರೋರುಪರಿ ಲಗ್ನೇನ ಸೌವರ್ಣಾಕ್ಷೇಣ ಭಾಸ್ವತಾ ।
ಬಹುಕೋಟಿಪ್ರಮಾಣೇನ ಧೃತಂ ಸ್ವಾಂತೇ ಬೃಹತ್ತರಂ ॥೨೫೬॥

ಮೇರುಪರ್ವತದ ಮೇಲಿನಿಂದ ಆರಂಭವಾಗಿ, ಮೇಲಿರುವ ಧೃವ ಮಂಡಲದ ವರೆಗೆ, 36,10,000 ಯೋಜನದ ಎತ್ತರದವರೆಗೆ, ಆನಂದಮಯನಾದ ಶಿಂಶುಮಾರ ರೂಪೀ ಪರಮಾತ್ಮನಿಂದ ಎತ್ತಿಹಿಡಿಯಲ್ಪಟ್ಟಿದೆ. ಆ ಶಿಂಶುಮಾರ ಮೂರ್ತಿಯಾದರೋ, ಉಂಗುರದಾಕೃತಿಗಳ ಮಧ್ಯಭಾಗವುಳ್ಳವನಾಗಿ, ಸುಂದರ ವದನಾರವಿಂದವನ್ನು ಕೆಳಮುಖವಾಗಿಟ್ಟುಕೊಂಡು, ತನ್ನ ನೀಳವಾದ ಪುಚ್ಛಭಾಗವನ್ನು ಮೇಲೆ ಮಾಡಿ ನಿಂತಿದ್ದಾನೆ; ತಾನೂ ತಿರುಗುತ್ತಾ, ತನ್ನ ಅವಯವರೂಪದಂತೆಯೇ ಇರುವ ಕಾಲಚಕ್ರವನ್ನು ನಿರಂತರ ತಿರುಗಿಸುತ್ತಿದ್ದಾನೆ. ಈ ಕಾಲಚಕ್ರದ ಕೋಟ್ಯಾಂತರ ಯೋಜನ ಉದ್ದವಾದ ಅಚ್ಚು ಮೇರುಪರ್ವತದ ಮೇಲ್ಭಾಗದಲ್ಲಿ ಕೀಲಿತವಾದಂತಿದೆ.

ಚಕ್ರಂಚೈಕಂ ಸ್ವರ್ಣಮಯಂ ಮಾನಸಾಚಲಮೂರ್ಧನಿ ।
ಸದಾಭ್ರಮದಿದಂ ಜ್ಯೋತಿಶ್ಚಕಂ ಭಾಮಯತೇಕಿಲ ॥೨೫೭॥

ಇದಂ ಚಕ್ರಂ ಕಾಲಚಕ್ರ ಭ್ರಮಣಾಯೈವ ನಿರ್ಮಿತಂ ।
ಯದಿದಂ ಚಕ್ರಮರ್ಕಸ್ಯ ಗತೇರೇವ ಕೃತಂಭವೇತ್ ॥೨೫೮॥

ತ್ವರಿತಾಕಾಲ ಚಕ್ರಸ್ಯ ಗತಿಃ ಕೇನಭವೇತ್ತದಾ ।
ವಿರುದ್ಧಗತಿ ಯುಗ್ಮಂತು ಚಕ್ರೇಣೈಕೇನ ಕೋವದೇತ್ ॥೨೫೯॥

ಅತಸ್ಸೂರ್ಯ ರಥೋಪ್ಯನ್ಯಸ್ತಚ್ಚಕ್ರಂಚಾಪರಂ ಭವೇತ್ ।
ಇದಂತು ಚಕ್ರಂ ಸುಮಹಜ್ಜ್ಯೋತಿಶ್ಚಕ್ರ ಪ್ರವರ್ತಕಂ ॥೨೬೦॥

ಶಿಂಶುಮಾರ ಪ್ರಭಾವೇನೈವಾಸ್ಯಚ ಭ್ರಮಣಂ ಸದಾ ।
ಕಥಂಯಂತ್ರೋಪರಿಸ್ಥಾಶ್ವೈಸ್ತದ್ಯಂತ್ರ ಭ್ರಮಣಂ ಭವೇತ್ ॥೨೬೧॥
ಕಾಲಚಕ್ರಸ್ಥಸೂರ್ಯಸ್ಯ ಕಥಂಮಂದ ಪ್ರಚಾರಣಂ ।
ಶನೈಶ್ಚಾರಯಿಂತುಂಚಾಸ್ಯ ಮಧ್ಯೇಚಕ್ರಾಂತರಂ ಭವೇತ್ ॥೨೬೨॥
ರಥಂಧಾರಯದೇಕಂ ಹಿ ಚಕ್ರಂತಸ್ಯಾಥ ಏವಹಿ ।
ಲೋಕೇಪಿದೃಶ್ಯತೇತದ್ವದ್ವಕ್ತ್ರವ್ಯಂ ಸರ್ವಥಾತ್ರಚ ॥೨೬೩॥
ಜ್ಯೋತಿಶ್ಚಕ್ರಗತೇರನ್ಯಾಗತಿರ್ನೋಚೇತ್ಕಥಂ ರವೇಃ ।
ಯತ್ಸೂರ್ಯರಥ ಯಾತ್ರಾಚ ಗ್ರಹಾಂತರ ರಥೋಪಮಾ ॥೨೬೪॥
ಕಾಲಚಕ್ರಸ್ಯ ಧಾರಾಸು ರಥಾಸ್ತತ್ತದ್ಗ್ರಹೋಚಿತಾಃ ।
ಹಿರಣ್ಮಯಾಸ್ಸಂತಿನೋಚೇದ್ಗತಿಸ್ತೇಷಾಂ ಕಥಂ ಭವೇತ್ ॥೨೬೫॥

ಮಾನಸಾಚಲದ ಮೇಲೆ ಸುವರ್ಣಮಯವಾದ ಒಂದು ಮಹಾಚಕ್ರವು ತಾನು ಸದಾ ಸುತ್ತುತ್ತಾ, ಇಡೀ ಕಾಲಚಕ್ರದ ಭ್ರಮಣೆಗೆ ಕಾರಣವಾಗಿದೆ.

[ಮಾನಸೋತ್ತರ ಪರ್ವತವೆಂಬುದು ಪೃಥ್ವೀಮಂಡಲದ ಕಡೆಯ (ಏಳನೇ) ದ್ವೀಪದಲ್ಲಿ ಹಬ್ಬಿರುವುದು. ಇದು ಭೂಮಂಡಲಕ್ಕೆ ತೊಡಿಸಿದ ಬಳೆಯಂತಿರುವುದು ಎಂದು ಹಿಂದೆಯೇ ಹೇಳಿದೆ. ಇದರ ಸುತ್ತಳತೆ 9.5100000 ಯೋಜನ (9,51,00000 × 6.06 ಮೈಲಿ) ಎಂಬುದು ಮುಂದೆ ತಿಳಿದು ಬರುವುದು. ಸುವರ್ಣ ಎಂದ ಕೂಡಲೇ ಗಟ್ಟಿ ಬಂಗಾರವೆಂಬ ಕಲ್ಪನೆ ನಮಗೆ ಬರುವುದು, ಆದರೆ ಅದು ಹಾಗಲ್ಲ. ಶಾಸ್ತ್ರೀಯ ವಿಜ್ಞಾನದಂತೆ ಸುವರ್ಣವು ತೇಜಃ ಪ್ರಧಾನವಾದ ವಸ್ತು; ಅದು ನಮಗೆ ಗೊತ್ತಿರುವುದಕ್ಕಿಂತ ಹೆಚ್ಚು ಹೆಚ್ಚು ಸೂಕ್ಷ್ಮರೂಪದಲ್ಲಿರುವುದು. ಇಲ್ಲಿ ಕಾಲಚಕ್ರದ ಸುವರ್ಣಪಟ್ಟಿಗಳೆಂಬುವು ಕೇವಲ ತೇಜೋರೂಪವಾದುವೇ ಹೊರತು, ಗಟ್ಟಿ ಬಂಗಾರವಲ್ಲ.

ಇಲ್ಲಿ ಹೆಸರಿಸಿರುವ ಮಹಾಚಕ್ರವೆಂಬುದು ಭೂಮಂಡಲಕ್ಕೆ ಸಮಾನಾಂತರವಾಗಿದೆ.]

ಈ ಚಕ್ರವು ಕಾಲಚಕ್ರದ ಭ್ರಮಣೆಗಾಗಿಯೇ ನಿರ್ಮಿತವಾಗಿರುವುದು; ಕೆಲವರು ಹೇಳುವಂತೆ, ಸೂರ್ಯರಥದ ಸಂಚಾರಕ್ಕಾಗಿ ಅಲ್ಲ.

ಸೂರ್ಯನ ಸಂಚಾರಕ್ಕಾಗಿಯೇ ಈ ಚಕ್ರವು ನಿರ್ಮಿತವಾಗಿದ್ದಿದ್ದರೆ, ಕಾಲ ಚಕ್ರದ ವೇಗವು ಸೂರ್ಯ ಸಂಚಾರದ ವೇಗಕ್ಕಿಂತ ಹೆಚ್ಚಾಗಿ ಹೇಗೆ ಸಂಭವಿಸುತ್ತಿತ್ತು ? ಅಥವ, ಒಂದೇ ಚಕ್ರದಿಂದ ಒಂದರ ಶೀಘ್ರಗತಿಯೂ ಇನ್ನೊಂದರ ಮಂದಗತಿಯೂ ಹೇಗೆ ಸಾಧ್ಯವಾಗುತ್ತಿತ್ತು ? ಆದುದರಿಂದ ಸೂರ್ಯರಥವೂ, ಅದರ ಚಕ್ರವೂ ಬೇರೆಯೆಂದೇ ತಿಳಿಯಬೇಕು. ಮಹಾಚಕ್ರವು ಮಾತ್ರ ಇಡೀ ಜ್ಯೋತಿಶ್ಚಕ್ರದ ಚಲನೆಗಾಗಿ ಉಂಟಾಗಿರುವುದು. ಇದು ಚಲಿಸುವುದು ಶಿಂಶುಮಾರ ಮೂರ್ತಿಯ ಪ್ರಭಾವದಿಂದ. ಒಂದು ವೇಳೆ ಇತರರು ಹೇಳುವಂತೆ ಆಗಿದ್ದಿದ್ದರೆ, ಯಂತ್ರದ ಮೇಲೆ ಓಡುವ ಕುದುರೆಗಳಿಂದ ಯಂತ್ರದ ಚಲನೆಯು ಸಾಧ್ಯವಾಗುವುದೇ ? ಅಲ್ಲದೆ, ಅದೇ ಕಾಲಚಕ್ರದ ಮೇಲೆ ಸೂರ್ಯನು ಮಂದಗತಿಯಿಂದ ಚಲಿಸುವುದು ಹೇಗೆ ? ಸೂರ್ಯನನ್ನು ಕಡಿಮೆ ವೇಗದಿಂದ ಕೊಂಡೊಯ್ಯಲು, ಕಾಲಚಕ್ರದ ಮುಖ್ಯಪಟ್ಟಿಯ ಮೇಲೆಯೇ ಚಲಿಸುವ ಸೂರ್ಯರಥದ ಚಕ್ರವು ಬೇರೆಯೇ ಆಗಿರಬೇಕು. ಅದು ಏಕಚಕ್ರವಾಗಿರುವುದು. ಲೋಕದಲ್ಲಿಯೂ ಕೂಡ ಎರಡು ವಸ್ತುಗಳ ಬೇರೆ ಬೇರೆ ವೇಗದ ಚಲನೆಗಳಿಗಾಗಿ ಎರಡೆರಡು ಚಕ್ರಗಳು ಕೂಡಿರುವುದನ್ನು ನಾವು ನೋಡಬಹುದು.

ಬೇರೆ ಬೇರೆ ಗ್ರಹಗಳು ಕಾಲಚಕ್ರದ ಬೇರೆ ಬೇರೆ ಪಟ್ಟಿಗಳ ಮೇಲೆ ತಮ್ಮ ತಮ್ಮ ರಥಗಳಲ್ಲಿ ಚಲಿಸುವಂತೆ, ಸೂರ್ಯನೂ ಕೂಡ ಏಕಚಕ್ರದ ಮೇಲೆಯೇ ಸಂಚರಿಸುತ್ತಾನೆ.

ತತ್ಕಾಲಚಕ್ರಧಾರಾಯಾಂ ಸಪ್ತಾಶ್ವಾಸ್ಸವಿತೂ ರಥಂ ।
ಚಕ್ರೇಣೈಕೇನ ಪರಿತಃ ಚಾರಯಂತಿ ದಿನೇ ದಿನೇ ॥೨೬೬॥

ಯತ್ತು ಚಕ್ರಂ ಮಾನಸಾಖ್ಯಗಿರೇರ್ಮೂರ್ಧನಿ ಪರ್ಯಟೇತ್ ।
ಹಿರಣ್ಮಯಂ ರತ್ನಕಾಂತ್ಯಾ ಪರಿತೋಭಾಸಯದ್ದಿಶಃ ॥೨೬೭॥

ಬಹುಯೋಜನ ವಿಸ್ತಾರಂ ಋತಾಖ್ಯಸ್ಯಹರೇಃಪ್ರಿಯಃ ।
ಶಿಂಶುಮಾರಾಖ್ಯರೂಪೇಣ ಹರಿಣಾ ಪ್ರೇರಿತಂತುತತ್ ॥೨೬೮॥

ಬೃಹದ್ರಥೋಪಮಂ ಜ್ಯೋತಿರ್ಮಯಂ ಚಕ್ರೋಪಮತ್ವತಃ ।
ಕಾಲಚಕ್ರಾಭಿಧಾನಂ ಯಜ್ಜ್ಯೋತಿರ್ಮಂಡಲಮುತ್ತಮಂ ॥೨೬೯॥

ತದ್ದಿವಃಪರಿತೋ ನಿತ್ಯಂಭ್ರಾಮಯೇತ್ತ್ವರಿತಂ ಕಿಲ ।
ಮೇರುಂಪ್ರದಕ್ಷಿಣೀಕೃತ್ಯ ಕಾಲಚಕ್ರಂಚ ತದ್ಬಲಾತ್ ॥೨೭೦॥

ಶಿಂಶುಮಾರಪ್ರಭಾವಾಚ್ಚ ಯೋಜನಾನಾಂ ದಿನೇ ದಿನೇ ।
ನವಕೋಟಿಂ ಲಕ್ಷಮೇಕಂ ಪಂಚಾಶಲ್ಲಕ್ಷ ಮೇವಚ ॥೨೭೧॥
ಪರಿಭ್ರಮತಿ ನಕ್ಷತ್ರಗ್ರಹ ರಾಶಿ ಗಣೈಸ್ಸಹ ।
ಶೀತೋಷ್ಣಮಧ್ಯಭೇದೇನ ತ್ರ್ಯಾತ್ಮಕತ್ವಾತ್ತ್ರಿನಾಭಿಯತ್ ॥೨೭೨॥
ಅನರ್ವಮಶ್ವಶೂನ್ಯತ್ವಾತ್ತತ್ಸ್ಥಾಯಸ್ಮಿನ್ನಿಲಾಖಿಲಂ ।
ಗ್ರಹನಕ್ಷತ್ರದೇವರ್ಷಿ ಸಿದ್ಧಗಂಧರ್ವ ಸೇವಿತಂ ॥೨೭೩॥
ಕಾಲಚಕ್ರಮಿದಂ ಶಿಂಶುಮಾರ ದೇವಾತ್ಪ್ರವರ್ತತೇ ।
ಸಪ್ತವಿದ್ಯಾಶ್ಚ ಯನ್ನಾಮ ಸದ್ಯೈವಾಶುಗಮಿತ್ವತಃ ॥೨೭೪॥
ಅಶ್ವಾಖ್ಯಾಏಕಏವೇದಂ ವಹತೀತಿಯತಃ ಶ್ರುತಿಃ ।
ಸಪ್ತಾಶ್ವನುಸ್ನಂ ತಚ್ಚಕ್ರಮನ್ಯದೇವ ರಥೇರವೇಃ ॥೨೭೫॥

ಕಾಲಚಕ್ರದ ಮುಖ್ಯವಾದ ಪಟ್ಟೆಯಮೇಲೆ ಚಲಿಸುವ ಸೂರ್ಯರಥಕ್ಕೆ ಹೂಡಿದ ಏಳು ಕುದುರೆಗಳುಂಟು. ಆ ರಥಕ್ಕೆ ಇರುವುದು ಒಂದೇ ಚಕ್ರ. ಆ ಚಕ್ರವು ಸೂರ್ಯ ರಥವನ್ನು ದಿನದಿನವೂ ಮೇರುವಿಗೆ ಪ್ರದಕ್ಷಿಣೆಯಾಗಿ ಸುತ್ತಿಬರಲು ಆಧಾರವಾಗಿದೆ. ಆದರೆ, ಸೂರ್ಯರಥದ ಸಂಚಾರಕ್ಕೆ ಅನುವು ಮಾಡಿ ಕೊಟ್ಟಿರುವ ಮಹಾಚಕ್ರವು ಶಿಂಶುಮಾರಮೂರ್ತಿಯ ಪ್ರಭಾವದಿಂದ ಸುತ್ತುತ್ತಿರುವುದು. ಅದು ಪುಷ್ಕರ ದ್ವೀಪದ ಮಾನಸೋತ್ತರ ಪರ್ವತ ಮೇಲಿದ್ದು ರತ್ನಪ್ರಭೆಯು ತನ್ನ ಕಾಂತಿಯಿಂದ ದಿಕ್ಕುದಿಕ್ಕುಗಳನ್ನೂ ಬೆಳಗುವುದು. ಅದು ಬಹು ವಿಸ್ತಾರವಾಗಿದ್ದು ಶ್ರೀಹರಿಗೆ ಅತ್ಯಂತ ಪ್ರಿಯವಾಗಿರುವುದು. ಬುಡದಿಂದ ಧ್ರುವನಕ್ಷತ್ರದವರೆಗೆ ಅದಕ್ಕೆ ಅನುಗುಣವಾಗಿ ಸಂಬಂಧ ಹೊಂದಿದ ಜ್ಯೋತಿರ್ಮಾರ್ಗಗಳ ಅನೇಕ ಪಟ್ಟಿಗಳಿರುವುದರಿಂದ ಇಡೀ ಕಾಲಚಕ್ರವು ಒಂದು ಮಹಾರಥದಂತೆ ಕಂಗೊಳಿಸುವುದು. ಈ ಜ್ಯೋತಿಶ್ಚಕ್ರವು ವೇಗವಾಗಿ ಪ್ರತಿದಿನವೂ ಮೇರುವಿಗೆ ಪ್ರದಕ್ಷಿಣೆಯಾಗಿ ಸುತ್ತುತ್ತಿರುವುದು. ಶಿಂಶುಮಾರ ಮೂರ್ತಿಯ ಸಂಕಲ್ಪ ಬಲದಿಂದ ದಿನವೊಂದಕ್ಕೆ ಈ ಕಾಲಚಕ್ರವು 9 ಕೋಟಿ 51 ಲಕ್ಷ ಯೋಜನದಷ್ಟು ದೂರವನ್ನು ಗ್ರಹನಕ್ಷತ್ರ ರಾಶಿಗಳ ಸಹಿತವಾಗಿ ಅತಿಕ್ರಮಿಸುವುದು. ತನ್ನ ಸ್ಥಿತಿಗಳ ಬದಲಾವಣೆಯಿಂದ ಭೂಖಂಡಕ್ಕೆ ಶೀತ, ಉಷ್ಣ, ಮಧ್ಯಮ ಕಾಲಗಳು ಉಂಟಾಗುವಂತೆ ಮಾಡುವುದರಿಂದ, ಈ ಕಾಲಚಕ್ರವು ತ್ರಿನಾಭಿಯುಳ್ಳದೆಂದು ಹೇಳಲ್ಪಡುತ್ತದೆ. ಕುದುರೆಗಳ ಅಗತ್ಯವಿಲ್ಲದೆ ಚಲಿಸುವುದರಿಂದ ಅದು 'ಅನರ್ವ' ಎನಿಸಿಕೊಳ್ಳುತ್ತದೆ. ಗ್ರಹಗಳೂ,

ನಕ್ಷತ್ರಗಳೂ, ನಕ್ಷತ್ರಗಳಂತಹ ದೇಹ-ಋಷಿ-ಗಂಧರ್ವ-ಸಿದ್ಧರ ವಾಹನಗಳೂ ಕಾಲ ಚಕ್ರವನ್ನು ಆಶ್ರಯಿಸಿಯೇ ತಮ್ಮ ತಮ್ಮ ಪಥಗಳಲ್ಲಿ ಸಂಚರಿಸುತ್ತವೆ. ಇಡೀ ಕಾಲಚಕ್ರದ ಚಲನೆಯು ಶಿಂಶುಮಾರ ದೇವನ ಪ್ರಭಾವದಿಂದಲೇ ಎಂಬುದನ್ನು ಮರೆಯಬಾರದು. ವಿಶ್ವಕ್ಕೆ ಆಧಾರವಾದ ಸಪ್ತ ವಿದ್ಯೆಗಳು ಈ ಕಾಲ ಚಕ್ರವನ್ನು ಆಶ್ರಯಿಸಿರುವುದರಿಂದ ಇದನ್ನು ಸಪ್ತಾಶ್ವವುಳ್ಳದ್ದೆಂದೂ, ಸಪ್ತ ವಿದ್ಯೆಗಳು ಏಕ ಮುಖವಾಗಿರುವುದರಿಂದ ಒಂದೇಕುದುರೆಯುಳ್ಳದ್ದೆಂದೂ ವರ್ಣಿಸುವುದು ಕಂಡು ಬಂದಿದೆ. ಇದು ರೂಪಕಾಲಂಕಾರದಂತೆ. ಆದರೆ ನಿಜವಾಗಿ ಸಪ್ತಾಶ್ವಗಳುಳ್ಳದ್ದು

ಸೂರ್ಯರಥ.

[ಕಾಲಚಕ್ರದ ಚಿತ್ರವನ್ನು ನಾವು ಮನಸ್ಸಿಗೆ ಸರಿಯಾಗಿ ತಂದುಕೊಳ್ಳ ಬೇಕಾದರೆ ಮುಖ್ಯವಾದ ಕೆಲವು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇಡೀ ಕಾಲಚಕ್ರವು ಒಂದು ತೆರೆದ ಛತ್ರಿಯನ್ನು ಹೋಲುವುದೆಂದು ಸ್ಥೂಲವಾಗಿ ಹೇಳಬಹುದು. ಶಿಂಶುಮಾರ ಮೂರ್ತಿಯ ನಿಲುವು ಛತ್ರಿಯ ನಡುವಿನ ದಂಡವಿದ್ದ ಹಾಗೆ. ವೃಶ್ಚಿಕಾಕಾರದ ಆ ಮೂರ್ತಿಯ ಬಾಲದ ತುದಿಯಲ್ಲಿ ಧ್ರುವ ನಕ್ಷತ್ರವಿರುವ ಸ್ಥಾನ ಛತ್ರಿಯ ಮೇಲ್ತುದಿ. ಮಾನಸೋತ್ತರ ಪರ್ವತದ ಮೇಲೆ ಶಿಂಶುಮಾರ ಮೂರ್ತಿಯ ಪ್ರಭಾವದಿಂದ ತಿರುಗುವ ಕಾಲಚಕ್ರದ ಮುಖ್ಯ ಪಟ್ಟಿಯು ಛತ್ರಿಯ ಬುಡದ ಅಂಚು ಇದ್ದ ಹಾಗೆ. ಈ ಪಟ್ಟಿಗೂ, ಧ್ರುವ ನಕ್ಷತ್ರಕ್ಕೂ ನಡುವೆ ಗ್ರಹ, ನಕ್ಷತ್ರ, ತಾರೆಗಳ ಸಂಚಾರಗಳಿಗೆ ಬೇಕಾದ ಅನೇಕಾನೇಕ ಪಟ್ಟಿಗಳವೆ. ಈ ಪಟ್ಟಿಗಳೆಲ್ಲಾ ಜ್ಯೋತಿರ್ಮಾರ್ಗಗಳೇ ಹೊರತು ಕೇವಲ ಸ್ಥೂಲ ಬಂಗಾರದ ಪಟ್ಟಿಗಳಲ್ಲ.

ದಿನವೊಂದಕ್ಕೆ ಕಾಲಚಕ್ರದ ಮುಖ್ಯಪಟ್ಟಿಯು 9 ಕೋಟಿ 51 ಲಕ್ಷ ಯೋಜನ ಗಳನ್ನು ಅತಿಕ್ರಮಿಸುವುದೆಂದು ಹೇಳಿದಾಗ, ಅದರ ಪರಿಕ್ರಮದ ಸುತ್ತಳತೆ $9,51,00000 \times 6.06$ ಮೈಲಿಗಳು ಎಂದ ಹಾಗಾಯಿತು. ಈ ವೃತ್ತಾಕಾರದ ತ್ರಿಜ್ಯವು 9,50,00000 ಮೈಲಿಗಳು ಎಂದಾಗುವುದು. ಇದು ಮೇರು ಮೂಲಕ್ಕೂ ಕಾಲಚಕ್ರದ ಮುಖ್ಯಪಟ್ಟಿಯ ಕೆಳಗಿರುವ ಮಾನಸೋತ್ತರ ಪರ್ವತಕ್ಕೂ ಇರುವ ದೂರ. ಆ ಪಟ್ಟಿಯ ಮೇಲೆ ಸೂರ್ಯರಥದ ಸಂಚಾರವೆಂದಾಗ, ಮೇರುಪರ್ವತಕ್ಕೂ ಸೂರ್ಯನಿಗೂ ಇರುವ ದೂರು $9\frac{1}{2}$ ಕೋಟಿ ಮೈಲಿಗಳು ಎಂದ ಹಾಗಾಯಿತು ;

ಅಲ್ಲದೆ, ಮೇರುಪರ್ವತ ದಕ್ಷಿಣದಲ್ಲಿ, 50 ಸಾವಿರ ಯೋಜನ ದೂರದಲ್ಲಿರುವ ಭರತ ಖಂಡವೆಂಬ ನಮ್ಮ ಅರಿವಿನ ಭೂಗೋಳಕ್ಕೂ ಇರುವ ದೂರ ಸುಮಾರು 9 ಕೋಟಿ, 30 ಲಕ್ಷ ಮೈಲಿ ಎಂದು ಹೇಳಿದ ಹಾಗಾಯಿತು. ಇದು, ಈಗಿನ ಭೂಗೋಳ ಶಾಸ್ತ್ರಜ್ಞರು ಹೇಳುವ ಲೆಕ್ಕಾಚಾರಕ್ಕೆ ಪೂರ್ಣವಾಗಿ ಹೊಂದಿಕೊಂಡಿದೆ. ಈ ಲೆಕ್ಕಾಚಾರವು 'ಕಾಕತಾಳೀಯ,' ವಾದ ಆಕಸ್ಮಿಕವಲ್ಲ; ವೈದಿಕ ಗ್ರಂಥಗಳ ಉಕ್ತಿ.

ಸೂರ್ಯಬಿಂಬವಿರುವುದು ಸಾಮಾನ್ಯವಾಗಿ ನಮ್ಮ ಭೂಗೋಳದ ಭೂಮಧ್ಯ ರೇಖೆಯ ನೇರದಲ್ಲಿ. ಸೂರ್ಯರಥದ ಸಂಚಾರಕ್ಕೆ ಆಶ್ರಯವಾಗಿರುವ ಕಾಲಚಕ್ರವನ್ನೇ ಶಿಂಶುಮಾರಮೂರ್ತಿ ಎತ್ತಿ ಇಳಿಸುವುದರಿಂದ, ಶ್ರೀಮದ್ಭಾಗವತ ಪಂಚಮಸ್ಕಂಧ ದಲ್ಲಿ ಹೇಳಿರುವಂತೆ 'ಉದಗಯನ,' 'ದಕ್ಷಿಣಾಯನ', 'ವೈಷುವದಯನ' ಗಳು ಸಂಭವಿಸಿ, ಚಳಿಗಾಲ, ಬೇಸಗೆ ಕಾಲ–ಮಧ್ಯಕಾಲಗಳೆಂಬ ಋತುಭೇದಗಳು ಸಂಭವಿ ಸುವುವು. ಇದು ಪುರಾಣೋಕ್ತಿ. ಈ ರೀತಿ ಋತುಬದಲಾವಣೆಗಳಾಗುವುದರಿಂದ, ಭೂಮಿಯು ತನ್ನ ಅಕ್ಷವನ್ನು $23\frac{1}{2}$. ಓರೆಯಾಗಿಟ್ಟುಕೊಂಡು ಸೂರ್ಯನಿಗೆ ಪ್ರದಕ್ಷಿಣೆ ಮಾಡುತ್ತಿದೆ ಎನ್ನುವುದು ಆಧುನಿಕ ಬುದ್ಧಿವಂತರ ಊಹೆಯೇ ಹೊರತು, ನಿಜವಲ್ಲ.

ಭೂಮಿಯು ಸೂರ್ಯನ ಸುತ್ತಲೂ ತಿರುಗುತ್ತಿದೆ ಎಂದರೂ, ಸೂರ್ಯನು ಕಾಲಚಕ್ರದ ಪಟ್ಟೆಯ ಮೇಲೆ ಮೇರುವಿಗೆ ಪ್ರದಿಕ್ಷಿಣೆಯಾಗಿ ಸುತ್ತುತ್ತಿರುವನೆಂದು ಹೇಳಿದರೂ ಲೆಕ್ಕಾಚಾರದಲ್ಲಿ ಯಾವ ವ್ಯತ್ಯಾಸವೂ ಕಂಡು ಬರುವುದಿಲ್ಲ. ಹೀಗಿರು ವಾಗ ಪುರಾಣೋಕ್ತ ಭೂಗೋಳದ ವಿಚಾರವನ್ನು ಕೈಬಿಟ್ಟು ಆಧುನಿಕರ ವಾದಗಳಿಗೆ ಅಂಟಿಕೊಂಡಿರುವುದು ಬುದ್ಧಿವಂತಿಕೆಯಲ್ಲ. ಅಲ್ಲದೆ, ಆತ್ಮಘಾತಕತನವೂ ಹೌದು- 'ನಮ್ಮ ವೈದಿಕ ಸಂಸ್ಕೃತಿ ಬಹು ಘನವಾದುದು' ಎಂದು ಹೇಳುವಾಗಲೇ, ಅದರಲ್ಲಿ ಹೇಳಿರುವ ವಿಷಯಗಳು ಆಧುನಿಕ ವಿಜ್ಞಾನಕ್ಕೆ ಹೊಂದಿಕೊಳ್ಳದ ಅಬದ್ಧಗಳು ಎನ್ನುವುದು ಯಾವ ನ್ಯಾಯ?

ಸೂರ್ಯರಥ, ಅದರ ಒಂದೇ ಚಕ್ರ, ಅದಕ್ಕೆ ಏಳು ಕುದುರೆಗಳು ಎನ್ನುವು ದನ್ನು ರೂಪಕವಾಗಿಯೂ, ನಿಜವಾದ ಅರ್ಥದಲ್ಲಿಯೂ ಗ್ರಹಿಸಬೇಕು. ಸೂರ್ಯ ಬಿಂಬದಿಂದ ಬರುತ್ತಿರುವುದು ಕೇವಲ ಲೋಕೋಪಯೋಗಿ ಶಾಖವೇ ಅಲ್ಲ. ಸೂರ್ಯ ಕಿರಣಗಳು ಸಹಸ್ರಬಗೆಯಾಗಿ, ವೇದ ಮಂತ್ರಗಳ ಬಲದಿಂದ, ಸಹಸ್ರಾರು ಬಗೆಯ

ಕಾರ್ಯಗಳನ್ನು ನಿರ್ವಹಿಸುವುವು. ವೇದಋಕ್ಕುಗಳು ಗಾಯತ್ರೀ, ತ್ರಿಷ್ಟುಪ್, ಉಷ್ಣಿಕ್ ಮೊದಲಾದ ಏಳು ಛಂದಸ್ಸುಗಳಲ್ಲಿದ್ದು, ವೇದ ಮಂತ್ರಗಳ ಪ್ರಸಾರ ಕಾರ್ಯದಲ್ಲಿ ತೊಡಗಿವೆ. ಆದುದರಿಂದ ಅವುಗಳಿಗೆ ಏಳು ಕುದುರೆಗಳ ಹೋಲಿಕೆ. ಘಳಿಗೆಗಳಿಂದ ಹಿಡಿದು ವರ್ಷದ ಪರ್ಯಂತ ಒಂದೇ ವಿಧವಾಗಿ ಕಾಲಮಾನವನ್ನು ತಿಳಿಸುತ್ತಾ ಹೋಗುವುದರಿಂದ, 360 ದಿನಸಗಳ ವರ್ಷವೆಂಬ ಕಾಲಸೂಚಕವಾದ ಒಂದೇ ಚಕ್ರವೆಂಬ ಸಂಕೇತ.

ನಮ್ಮ ಚರ್ಮಚಕ್ಷುಸ್ಸಿಗೆ ಗೋಚರಿಸದಿದ್ದರೂ, ಸೂರ್ಯರಥಕ್ಕೆ ವರ್ಷಸೂಚಕವಾದ ಒಂದೇ ಚಕ್ರವೂ, ಏಳು ಬಣ್ಣಗಳ ಕುದುರೆಗಳ ರೂಪದಲ್ಲಿರುವ ಗಾಯತ್ರೀ ಮೊದಲಾದ ಏಳು ಕುದುರೆಗಳೂ ಇದ್ದೇ ಇವೆ. ಇವೆಲ್ಲಾ ಯೋಗಿಗಳು ಕಂಡು ಹೇಳಿರುವ ಮತ್ತು ಈಗಲೂ ಯೋಗಿಗಳು ಕಾಣಬಹುದಾದ ನಿಜಾಂಶಗಳೇ ಹೊರತು, ಕೇವಲ ಊಹೆಗಳಲ್ಲ. ಜಗತ್ತಿನಲ್ಲಿ ಸರ್ವತ್ರತುಂಬಿರುವ ವಿಷ್ಣುವು ಜಗತ್ತಿನಲ್ಲಿ ಸಂಚರಿಸುವ ಪ್ರಾಣಿಸಮೂಹಕ್ಕೆ ಹೇಗೆ ಅಡ್ಡಿಯಾಗುವುದಿಲ್ಲವೋ ಹಾಗೆ, (ಪುಷ್ಕರದ್ವೀಪಕ್ಕೂ ಶಾಕದ್ವೀಪಕ್ಕೂ ನಡುವೆ) ಕ್ಷೀರ ಸಮುದ್ರದಲ್ಲಿರುವ ಶ್ವೇತದ್ವೀಪವೆಂಬ ವೈಕುಂಠ ಸದೃಶವಾದ ವಿಷ್ಣುಲೋಕವು ಕಾಲಚಕ್ರದಗತಿಗೆ ಅಡ್ಡಿಯಾಗಿಲ್ಲ.

ಯಥಾಸರ್ವಗತೋ ವಿಷ್ಣುರ್ನರುಣದ್ಧಿ ಜಗದ್ಗತಿಮ್ ।
ಶ್ವೇತದ್ವೀಪಸ್ತಥೈವಾಸ್ಯ ಗತೇರ್ನಪ್ರತಿಬಂಧಕಃ ॥೨೭೬॥

[ಶ್ವೇತ ದ್ವೀಪವು ಇದ್ದರೂ ಅಡ್ಡಿಯಾಗಿಲ್ಲ ಎಂದರೆ, ಅದು ಆಕಾಶತತ್ವದಂತೆ, ಅಥವ ಅದಕ್ಕಿಂತಲೂ ಸೂಕ್ಷ್ಮವಾಗಿರುವುದರಿಂದ ಅಡ್ಡಿಯಲ್ಲ ಎಂದು ತಿಳಿಯಬೇಕು– ಗಾಜು ಸ್ಥೂಲ ಪದಾರ್ಥ. ಆದರೂ ಅದು ತನ್ನ ಮೂಲಕ ಬೆಳಕು ಹಾದು ಹೋಗಲು ಹೇಗೆ ಅಡ್ಡಿಯಾಗುವುದಿಲ್ಲವೋ ಹಾಗೆ! ಇದರಂತೆ, ಮೇರುಪರ್ವತ ಮೊದಲಾದವು ಇದ್ದರೂ ನಮ್ಮ ಕಣ್ಣಿಗೆ ಅವು ಗೋಚರಿಸುವುದಿಲ್ಲ ಎಂದೂ ಪುರಾಣಗಳಲ್ಲಿ ಹೇಳಬಿಟ್ಟಿದ್ದಾರೆ—" ಅದೃಶ್ಯಾ ಧಾತವಸ್ಸರ್ವೇ ಸಮುತ್ಪನ್ನಾ ಜಲಾದಯಃ".]

ಯತ್ಸಮಾನತ್ರಿಂಶದಹೋರಾತಾಣೀತಿ ವಚಸ್ತುತತ್ ।
ತ್ರಿಂಶತ್ಪದೋಪರಿಷ್ಟಾತ್ ಘಟಿಕಾಪದಪದ್ಧವೇತ್ ॥೨೭೭॥
ಯನ್ಮಧ್ಯ ಪದಲೋಪಾಖ್ಯ ಸಮಾಸೋಪ್ಯುಚ್ಯತೇಬುಧೈಃ ।
ಮುಹೂರ್ತಾನಿ ಭವಂತೀತಿ ವಾಕ್ಯಕಲ್ಪಕ ಕಲ್ಪಯೋಃ ॥೨೭೮॥

ಐಕ್ಯಾಭಿಪ್ರಾಯತಃ ಪ್ರೋಕ್ತಾ ಸರ್ವಜ್ಞ ವ್ಯಾಸಯೋಗಿನಾ ।
ಅತಃ ಸಮಾನಾತ್ರಿಂಶತ್ಯೋ ಘಟಿಕಾಯತ್ರ ತದ್ದಿನಂ ॥೨೭೯॥
ಸಾರಾತ್ರಿಶ್ಚ ಮುಹೂರ್ತಸ್ಯ ಮಾನಕ್ಲೃಪ್ತ್ಯೈ ಭವೇದಿತಿ ।
ಅರ್ಥೋಽಭೂತ್ಸ್ಮೃತಿವಾಕ್ಯಸ್ಯ ಯುಕ್ತಿತೋಽನತುಶಕ್ತಿತಃ ॥೨೮೦॥
ಇದಂಚಾರ್ಕೇ ಮೇಷತುಲಾ ಸಂಸ್ಥೇಽಸ್ಯಾನ್ನಾನ್ಯಥಾ ಭವೇತ್ ।
ದಿನವೃದ್ಧಿಹ್ರಾಸ ಯುಕ್ತಾ ಸ್ತೈತೌಮಾಸವ್ರಭಾಯತಃ ॥೨೮೧॥
ತ್ರಿಂಶತ್ರಿಂಶದ್ಘಟಿಕತಾತ್ಯೈವತನ್ನಿಶಿಚಾಹ್ನಿ ಚ ।
ಚತುರ್ವಿಂಶತಿ ಸಂಖ್ಯಾತಾ ಘಟಿಕಾಯಾಃ ಷಡುತ್ತರಾಃ ॥೨೮೨॥
ತಾಃಷಡ್ಭ್ಯೋಽರ್ಧಂ ಸಮಾದಾಯ ಮುಹೂರ್ತಾನ್ದ್ವಾದಶಾಂಜಸಾ ।
ಕುರ್ಯುರಹ್ನಿ ಚ ರಾತ್ರೌ ತತ್ತುಲಾಮೇಷಾಖ್ಯಮಾಸಯೋ ॥೨೮೩॥
ಯತ್ಸಾರ್ಧ ಘಟಿಕಾದ್ವಂದ್ವಂ ಮುಹೂರ್ತಂಸೂರಯೋಽವಿದುಃ ।
ವೃಷಭಾದ್ಯೇತು ರಾಶೀನಾಂ ಪಂಚಕೇಽರ್ಕೇಽಸ್ಥಿತೇಽಸತಿ ॥೨೮೪॥
ವರ್ಧಂತೇಽಹಾನಿ ರಾತ್ರಿಸ್ತು ಕ್ರಮಾತ್ಸಂಕ್ಷಯತೇ ತದಾ ।
ವೃಶ್ಚಿಕಾದಿಷು ರಾಶಿಷ್ವಪ್ಯೇವಮರ್ಕೇ ಸ್ಥಿತೇಽಸತಿ ॥೨೮೫॥
ದಿನಾನಿ ಹ್ರಸಿತಾನಿಸ್ಯುರ್ವರ್ಧಂತೇ ರಾತ್ರಯೋಽಪಿಚ ।
ತದ್ದ್ವಾದಶ ಮುಹೂರ್ತಾನಿ ಕಥಂರಾತ್ರೇರ್ದಿನಸ್ಯಚ ॥೨೮೯॥
ತದಾಭವೇಽಯುಸ್ತೇನಾತ್ರನ ಮುಹೂರ್ತಸ್ಯಕಲ್ಪನಾ ।
ಅತೋಽಮೇಷಸ್ಥಿತೇಭಾನೌ ತುಲಾಸ್ಥೇವಾ ಪ್ರಕಲ್ಪಯೇತ್ ॥೨೮೭॥
ಮುಹೂರ್ತಮಾನಂ ನಾನ್ಯತ್ರೇತ್ಯಾಹ ಭಾಗವತೇ ಶುಕಃ ।

ಅಹೋರಾತ್ರಿಗಳ ವಿಷಯದಲ್ಲಿ ಮೂವತ್ತು ಮೂವತ್ತು ಎಂದು ಹೇಳಿರುವುದನ್ನು ಮೂವತ್ತು ಮೂವತ್ತು ಘಳಿಗೆಗಳೆಂದು ತಿಳಿಯಬೇಕು, ಇದು ಲುಪ್ತ ಮಧ್ಯಮ ಸಮಾಸ; ಬಿಟ್ಟಿರುವ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇದರ ಪ್ರಕಾರ ಒಂದು ಘಳಿಗೆ ಎಂಬುದು 24 ನಿಮಿಷಗಳಿಗೆ ಸಮಾನವಾಗುವುದು. $(12 \times 60 \div 30)$ ಮುಹೂರ್ತದ ಕಾಲನಿರ್ಣಯಕ್ಕಾಗಿ. ಘಳಿಗೆಗಳ ಎಣಿಕೆಯು ಪ್ರವೃತ್ತವಾಗಿದೆ. (ಶುಭ ಕಾರ್ಯಗಳಲ್ಲಿ ಮೂಹೂರ್ತ ನಿರ್ಣಯದ ಆವಶ್ಯಕತೆ ಇರುವುದು ಎಲ್ಲರಿಗೂ ತಿಳಿದ ವಿಷಯ). ಒಂದು ಮುಹೂರ್ತ$=2\frac{1}{2}$ ಘಳಿಗೆ.

$2\frac{1}{2}$ ಘಳಿಗೆ $(24 \times \frac{5}{2})$= 60 ನಿಮಿಷ, ಅಥವ ಒಂದು ಘಂಟೆ. ಹೀಗೆ ಅರ್ಥೈಸ ಬೇಕೆಂದು ಸರ್ವಜ್ಞರಾದ ವೇದವ್ಯಾಸರ ಅಭಿಪ್ರಾಯ. (ಹಗಲು = 12 ಘಂಟೆ; ರಾತ್ರಿ = 12 ಘಂಟೆ) ಎಂಬ ಕಲ್ಪನೆಯು ಇಲ್ಲಿ ಕಂಡು ಬಂದಿದೆ.)

ಹಗಲು ಹನ್ನೆರಡು ಘಂಟೆ, ರಾತ್ರಿ ಹನ್ನೆರಡು ಘಂಟೆ ಎಂಬ ಸಮಾನ ವಿಭಾಗವು ಸೂರ್ಯನು ತುಲಾ ಮತ್ತು ಮೇಷರಾಶಿಗಳಲ್ಲಿರುವಾಗ ಮಾತ್ರ ಸರಿಯಾಗಿ ಅನ್ವಯವಾಗುವುದು. ಈ ಎರಡು ರಾಶಿಗಳಲ್ಲಿ ಸೂರ್ಯನು ಸಂಚರಿಸುವಾಗ ಹಗಲು ರಾತ್ರಿಗಳಲ್ಲಿ ಹೆಚ್ಚು ಕಡಿಮೆಯಾಗುವ ಘಳಿಗೆಗಳ ವ್ಯತ್ಯಾಸವು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಆಗ ಹಗಲು ಹನ್ನೆರಡು ಮುಹೂರ್ತ, ರಾತ್ರಿ ಹನ್ನೆರಡು ಮುಹೂರ್ತ ಎನ್ನುವುದು ಸರಿ, ಸೂರ್ಯ ಸಂಚಾರದ ಪಥವು ಈ ರಾಶಿಗಳ ಉತ್ತರಕ್ಕೆ ಅಥವ ದಕ್ಷಿಣಕ್ಕೆ ಬದಲಾಯಿಸುವಾಗ ಹಗಲು ರಾತ್ರಿಗಳ ಕಾಲ ಪ್ರಮಾಣ ಗಳು ವ್ಯತ್ಯಾಸ ಹೊಂದುವುವು. ಈ ಕಾರಣದಿಂದಲೇ ಹಗಲು ರಾತ್ರಿಗಳಿಗೆ ಹನ್ನೆರಡು ಮುಹೂರ್ತಗಳೆಂಬ ಮಾತನ್ನು ತುಲಾ ಮೇಷಗಳಿಗೆ ಹೊರತು ಬೇರೆ ರಾಶಿಗಳಿಗೆ ಅನ್ವಯಿಸಬಾರದೆಂದು ಶ್ರೀಮದ್ಭಾಗವತದಲ್ಲಿ ಶ್ರೀ ಶುಕಾಚಾರ್ಯರು ಹೇಳಿರುವುದು.

ಭೂಮಧ್ಯರೇಖೆಗೆ ಉತ್ತರದಲ್ಲಿರುವವರಿಗೆ, ಸೂರ್ಯನು ವೃಷಭರಾಶಿಯಿಂದ ಹಿಡಿದು ಉತ್ತರದ ಐದು ರಾಶಿಗಳಲ್ಲಿ ಸಂಚರಿಸುವಾಗ ಹಗಲಿನ ಅವಧಿಯು ಹೆಚ್ಚುತ್ತಾ ಹೋಗುವಂತೆ ರಾತ್ರಿಯ ಅವಧಿಯು ಕಡಿಮೆಯಾಗುತ್ತಾ ಹೋಗುವುದು. ಅದೇ ರೀತಿಯಾಗಿ ಸೂರ್ಯನು ವೃಶ್ಚಿಕ ರಾಶಿಯಿಂದ ಹಿಡಿದು ದಕ್ಷಿಣದ ಐದು ರಾಶಿಗಳಲ್ಲಿ ಸಂಚರಿಸುವಾಗ ಅವರಿಗೆ ರಾತ್ರಿಯ ಅವಧಿಯು ಹೆಚ್ಚುತ್ತಾ, ಹಗಲಿನ ಅವಧಿಯು ಕಡಿಮೆಯಾಗುತ್ತಾ ಹೋಗುವುದು.

[ಈ ಮೇಲಿನ ವಿವರಣೆಯಿಂದ, ನಾವು ವಾಸಿಸುವ ಭೂಭಾಗವು ಗೋಳಾ ಕಾರವಾಗಿರುವುದೆಂಬುದನ್ನು ನಮ್ಮ ಪ್ರಾಚೀನರು ತಿಳಿದಿದ್ದರೆಂಬುದು ಸ್ಪಷ್ಟವಾಗು ತ್ತದೆ. ಗೌತಮರ ಶಾಪದಿಂದಲೂ, ಕಲಿಯುಗದ ಪ್ರಭಾವದಿಂದಲೂ ಈ ಅಂಶವನ್ನು ಮರೆತಿದ್ದ ಜನ, ಗ್ರೀಕರ ಟಾಲೆಮಿ ಮೊದಲಾದವರಂತೆ, ಭೂಮಿಯು ಕೇವಲ ಚಪ್ಪಟೆಯಾಗಿರುವುದೆಂದೇ ಭಾವಿಸಿದ್ದರು, ಮುಂದೆ ಬಂದ ವಿಜ್ಞಾನ ಪಕ್ಷದ ಕೋಪ ರ್ನಿಕಸ್ ಮೊದಲಾದವರು ಅವರಲ್ಲಿ ತಪ್ಪುಕಂಡುಹಿಡಿದುದು ಸಹಜವೇ ಆಗಿದೆ. ಭೂಮಿಯನ್ನು ಚಪ್ಪಟೆಯಾದುದೆಂದು ಅವರು ತಿಳಿದುದ್ದಕ್ಕೆ ಕಾರಣವೂ ಬೇರೆಯೂ

ಆಗಿದೆ. ಸಪ್ತ ದ್ವೀಪ ಸಪ್ತ ಸಾಗರಗಳ ಹರವನ್ನು ಆಕಾಶ ಯಾನದಲ್ಲಿ ಕುಳಿತು ಬಹಳ ಎತ್ತರದಿಂದ ವೀಕ್ಷಿಸಿದರೆ, ಭೂಮಂಡಲವು ಚಪ್ಪಟೆಯಾಗಿ, ರೂಪಾಯಿ ನಾಣ್ಯದಂತೆಯೇ ಕಾಣುವುದು. ಆದರೆ, ಗ್ರೀಕರ ವಿದ್ವಾಂಸರು ಈ ಸಪ್ತದ್ವೀಪ ಸಪ್ತ ಸಾಗರಗಳ ವಿಚಾರವನ್ನು ಮರೆತಿದ್ದರು ; ಅಥವ, ಮುಸುಕು ಮುಸಕಾಗಿ ಗ್ರಹಿಸಿದ್ದರು.

ನಿಜಹೇಳುವುದಾದರೆ, ಒಟ್ಟು ಭೂಮಂಡಲವು ಚಪ್ಪಟೆಯಾಗಿರುವಂತೆಯೇ ಇದೆ ; ನಾವು ವಾಸಿಸುವ ಜಂಬೂ ದ್ವೀಪದಂಚಿನ ಭರತಖಂಡವು ಮಾತ್ರ ಗೋಳಾಕಾರವಾಗಿಯೇ ಇದೆ. ಆದರೆ, ಒಂದು ಮಾತನ್ನು ಮಾತ್ರ ಖಚಿತವಾಗಿ ನೆನಪಿನಲ್ಲಿಡಬೇಕು ; ನಮ್ಮ ಭೂಗೋಳವು ಸೂರ್ಯನನ್ನು ಸುತ್ತಿ ಬರುವ ಗ್ರಹವಲ್ಲ.]

**ಗ್ರಹಗಳ ಸಂಚಾರ**

ತ್ರಿಂಶಲ್ಲಕ್ಷಾಣಿ ಚತ್ವಾರಿ ಲಕ್ಷಾಣ್ಯಷ್ಟಶತಾನಿಚ ॥೨೮೮॥
ಯೋಜನಾನಾಂ ಮುಹೂರ್ತೇಽಸ್ಮಿನ್ನೈಕೈಕಸ್ಮಿನ್ರವೇ ರಥಃ ।
ಕಾಲಚಕ್ರಸ್ಥಿತೋಽಮಂದಂ ಪರ್ಯಟೇತ್ಪರಿತಃ ಕಿಲ ॥೨೮೯॥
ಏವಂಚ ಕೋಟ್ಯಷ್ಟಕಾನಿ ತಥಾಲಕ್ಷಾಣಿಷೋಡಶ ।
ವಿಂಶತಿಂಚ ಸಹಸ್ರಾಣಾಂ ಸೂರ್ಯೋಽಯಾತಿ ದಿನೇ ದಿನೇ ॥೨೯೦॥

ಇದಂ ಸೂರ್ಯಗತೇರ್ಮಾನಂ ಯದೀಪಚ್ಛನಕ್ಷೈರ್ಹಿಸಾ ।
ಪ್ರಾಗುಕ್ತ ಗತಿಮಾನಂತು ತ್ವರಯಾ ಪರಿತೋಽದಿವಂ ॥೨೯೧॥

ಗಚ್ಛತಃ ಕಾಲಚಕ್ರಸ್ಯೇತ್ಯಾಹ ಭಾಗವತೇ ಶುಕಃ ।
ಅತೋಽವಿರುದ್ಧ ಶಂಕಾತ್ರ ನೈವಕಾರ್ಯಾ ವಿಚಕ್ಷಣೈಃ ॥೨೯೨॥

ಲಕ್ಷೋಚ್ಛ್ರಿತಃ ಸೂರ್ಯರಥಃ ಸಾರುಣಃ ಸಪ್ತವಾಹನಃ ।
ಕಾಲಚಕ್ರಸ್ಥಿತಾನ್ರಾಶೀನ್ ಮಂದಂಮಂದಂವ್ರಜನ್‌ಕ್ರಮಾತ್ ॥೨೯೩॥

ಪೃಷ್ಠೇಽಪೃಷ್ಠೇಽಸ್ಥಿತಂ ರಾಶಿಂ ಸ್ಪೃಶೇನ್ನೋತ್ತರಗಾಮಿನಂ ।
ಅತೋಽವಾಮಗತಿಃ ಪ್ರೋಕ್ತಾ ಚಕ್ರಧಾರಾಸ್ಥಿತಸ್ಯಚ ॥೨೯೪॥

ಕ್ರಮೇಣ ಪೃಷ್ಠರಾಶಿಂತು ಮಾಸಮಾತ್ರೇಽಸ್ಪೃಶೇದ್ರವಿಃ ।

ಮುಹೂರ್ತವೊಂದಕ್ಕೆ 34,00800 ಯೋಜನವನ್ನು ಸೂರ್ಯನ ರಥವು ಕ್ರಮಿಸುವುದು. ಕಾಲಚಕ್ರದ ವೇಗಕ್ಕಿಂತ ಕಡಿವೇಗ. ಈ ರೀತಿಯಾಗಿ ಅದು ದಿನವೊಂದಕ್ಕೆ 8,16,20,000 ಯೋಜನವನ್ನು ಕ್ರಮಿಸಿದಂತಾಗುವುದು. ಪೂರ್ಣಾಂಕಿಯು ಈ ಲೆಕ್ಕದಲ್ಲಿ ಸ್ವಲ್ಪ ಕಡಿಮೆಯೆಂದು ತಿಳಿಯಬೇಕು. (34,00800 × 24 = 8,16,19,200 = 9,16,200000) ಹಿಂದೆ ಹೇಳಿದ 9,51 00000 ಯೋಜನಓಟವು ಕಾಲಚಕ್ರದ ಪಟ್ಟಿಯನ್ನು ಕುರಿತು. ಇದು ಭಾಗವತದಲ್ಲಿ ಶುಕಾಚಾರ್ಯರು ಹೇಳಿದ ಲೆಕ್ಕಾಚಾರಕ್ಕೆ ಅನುಗುಣವಾಗಿದೆ. ಆದುದರಿಂದ ಇಲ್ಲಿ ಹೇಳಿದ ಎರಡು ಬಗೆಯ ವೇಗಗಳ ವಿಷಯದಲ್ಲಿ ಯಾವ ಶಂಕೆಗೂ ಆಸ್ಪದವಿಲ್ಲ ಎಂದು ಬುದ್ಧಿವಂತರು ಆಲೋಚಿಸಬೇಕು.

ಸೂರ್ಯರಥವು, ಅರುಣ ಮತ್ತು ಸಪ್ತಾಶ್ವಗಳ ಸಹಿತವಾಗಿ, ಭೂಮಾನದಿಂದ ಒಂದು ಲಕ್ಷ ಯೋಜನದ ಮೇಲಿದೆ. (ಎಂದರೆ, ಹತ್ತು ಸಾವಿರ ಯೋಜನ ಎತ್ತರವಾಗಿರುವ ಮಾನಸೋತ್ತರ ಪರ್ವತದ ಮೇಲೆ, 90,000 ಯೋಜನದೆತ್ತರದಲ್ಲಿ ಕಾಲಚಕ್ರದ ಪಟ್ಟಿ ಇದ್ದ ಹಾಗಾಯಿತು. ಅದರ ಮೇಲೆ ಸೂರ್ಯರಥದ ಸಂಚಾರ. ಹೀಗೆ ಸಂಚರಿಸುವ ಸೂರ್ಯನು, ತನ್ನ ಮುಂದಗತಿಯಿಂದ, ಹಿಂದೆ ಹಿಂದಿನ ರಾಶಿಗಳನ್ನು ಕ್ರಮವಾಗಿ ಮುಟ್ಟುತ್ತಾನೆ ; ಮುಂದಿನ ರಾಶಿಗಳನ್ನಲ್ಲ. ಇದನ್ನು ವಾಮಗತಿ (ಹಿಂದೋಟ) ಎನ್ನುತ್ತಾರೆ. ಹಿಂದೆ ಹಿಂದಿನ ಒಂದೊಂದು ರಾಶಿಯನ್ನು ತನ್ನ ವಾಮಗತಿ ಅಥವ ಹಿಂದೋಟದಿಂದ ಅತಿಕ್ರಮಿಸಲು ಸೂರ್ಯನಿಗೆ ಒಂದೊಂದು ತಿಂಗಳು ಹಿಡಿಯುವುದು.

[ಇಲ್ಲಿನ ವಿವರಣೆಯನ್ನು ಕುರಿತು ಆಲೋಚಿಸಿದಾಗ, ಸೂರ್ಯನ ಏಕಚಕ್ರದ ರಥವೆಂಬುದೂ, ಅದರಲ್ಲಿ ಅದನ್ನು ನಡೆಸುವ ಅರುಣನು ಕುಳಿತಿರುವ ಸ್ಥಾನವೂ, ಆ ರಥವನ್ನೆಳೆಯುವ ಗಾಯತ್ರ್ಯಾದಿ ಕುದುರೆಗಳೂ ಇರುವುವೆಂಬುದು ಸ್ಪಷ್ಟವಾಗಿದೆ, ಇದುವರೆಗೆ ಅಲ್ಲಲ್ಲಿ ಹೇಳಿದಂತೆ, ಆ ರಥ, ಮತ್ತು ಅಶ್ವಗಳು ನಮ್ಮ ಅನುಭವದಲ್ಲಿ ಕಂಡುಬರುವಂತಹ ವಸ್ತುಗಳಿಂದ ಉಂಟಾಗಿರುವುವಲ್ಲ; ಆದುದರಿಂದ ಅವು ಇದ್ದರೂ ನಮಗೆ ಗೋಚರಿಸುವುದಿಲ್ಲ.

ಕಾಲಚಕ್ರದ ಸುತ್ತಳತೆಯು 9,51,00000 ಯೋಜನವಾಗಿದ್ದು, ಅದರ ಮೇಲೆ ಸೂರ್ಯನ ರಥವು 8,16,20,000 ಯೋಜನದಷ್ಟು ಮಾತ್ರ ಸಂಚರಿ



Retrograde movements of the sun and the moon ; and the phases of the moon.

ಸಿದರೆ, ಸೂರ್ಯನು ಋತುಮಾನಕ್ಕನುಗುಣವಾಗಿ ಪ್ರತಿದಿನವೂ ಗೊತ್ತಾದ ಒಂದೇ ಕಾಲಕ್ಕೆ ಸರಿಯಾಗಿ ಉದಯಿಸುವುದು ಹೇಗೆ ಎಂಬ ಪ್ರಶ್ನೆ ತಲೆಹಾಕಬಹುದು. ಆದಕ್ಕೆ ಸಮಾಧಾನ ಹೀಗೆ-ಒಂದು ಸಾವಿರ ಗಜ ಉದ್ದವಿರುವ, ಗಾಡಿಯಿಂದ ಗಾಡಿಗೆ ಸಂಚಾರ ಸಂಪರ್ಕವಿರುವ ಒಂದು ರೈಲಿನಲ್ಲಿ ಒಬ್ಬಾತ ರೈಲು ಮುಂದೆ ಸಾಗುತ್ತಿರುವಾಗಲೇ 500 ಗಜದಷ್ಟು ದೂರ ಮುಂದೆ ನಡೆದುಕೊಂಡು ಹೋಗುತ್ತಾನೆ, ಎನ್ನೋಣ. ಅದಕ್ಕೆ 10 ನಿಮಿಷ ಹಿಡಿಯಿತು ಎನ್ನೋಣ. ಆಗ ಅವನು ನಿಜವಾಗಿ. ಅತಿಕ್ರಮಿಸಿದ ದೂರವು, ಹತ್ತು ನಿಮಿಷಗಳಲ್ಲಿ ಕಂಬಿಗಳ ಮೇಲೆ ರೈಲು ಅತಿಕ್ರಮಿಸಿದ ದೂರ+500 ಗಜ ಆಗಿರುತ್ತದೆಯಲ್ಲವೆ? ಅದರಂತೆ, 8,16,200 ಯೋಜನಕ್ಕೆ 9,51,000 ಯೋಜನಕ್ಕೆ ಸರಿಹೊಂದುವಂತೆ ಉಳಿದ 1,34, 80000 ಯೋಜನಗಳನ್ನು ಕೂಡಿಸಿಕೊಳ್ಳಬೇಕು.

ಇಲ್ಲಿ ನಾವು ಗಮನಿಸಬೇಕಾದ ಇನ್ನೊಂದು ಅಂಶವೂ ಉಂಟು. ಸೂರ್ಯನ ವಾಮಗತಿಯನ್ನು ಪರಿಗಣಿಸಿದಾಗ, ಅವನ ರಥವು ಕಾಲಚಕ್ರದೊಡನೆಯೇ ಮುಂದೆ ಹೋಗುತ್ತಿರುವ ನಕ್ಷತ್ರರಾಶಿಗಳಿಗಿಂತ ಪ್ರತಿದಿವಸ ಒಂದೊಂದು ಅಂಶದಷ್ಟು (ಡಿಗ್ರಿ) ಹಿಂದೆ ಬೀಳುವುದು. ಎಂದರೆ, ತತ್ಕಾಲ ಸಂಬಂಧವಾದ ರಾಶಿಯು ಸೂರ್ಯರಥಕ್ಕಿಂತ ಒಂದಂಶ ಮುಂದೆ ಹೋಗಿರುವುದು. ಸೂರ್ಯನ ರಥವು ನಿಜವಾಗಿ ಹಿಂದೆ ಹಿಂದಕ್ಕೆ ಚಲಿಸುವುದಿಲ್ಲ; ರಾಶಿಗಳ ದೃಷ್ಟಿಯಿಂದ ಅದು ಹಿಂದೆ ಬಿದ್ದಂತೆ ಆಗುವುದಷ್ಟೆ.]

> ಚಂದ್ರಶ್ಚಾಪಿ ತತೋ ಮಂದಗತಿತ್ವಾತ್ಪೃಷ್ಠತಃ ಸ್ಥಿತಂ ॥೨೯೫॥
> ರಾಶಿಂ ಸಾರ್ಧದಿನ ದ್ವಂದ್ವೇನೈವ ಸಂಸ್ಪೃಶತಿಕ್ರಮಾತ್ ।
> ಅತಸ್ತ್ವರಾ ಪೃಷ್ಠಗತಾ ನತೂತ್ತರಗತಾವಿಧೋಃ ॥೨೯೬॥

ಚಂದ್ರ ರಥದ ವೇಗವು ಸೂರ್ಯರಥದ ವೇಗಕ್ಕಿಂತ ಕಡಿಮೆ. ಅದು, ತನ್ನ ಹಿಂದೋಟದಿಂದ 30 ಅಂಶಗಳ ಒಂದೊಂದು ರಾಶಿಯನ್ನು $2\frac{1}{2}$ ದಿವಸಗಳಲ್ಲಿ ಅತಿಕ್ರಮಿಸಿಬಿಡುತ್ತದೆ. ಆದುದರಿಂದ ಹಿಂದೆ ಬೀಳುವ ವಿಷಯದಲ್ಲಿ ಸೂರ್ಯರಥಕ್ಕಿಂತ ಚಂದ್ರರಥದ ವೇಗ ಹೆಚ್ಚು.

[ಚಂದ್ರನ ರಥದ ಪಥವು ಸೂರ್ಯರಥದ ಪಥಕ್ಕಿಂತ ಒಂದು ಲಕ್ಷ ಯೋಜನ ಎತ್ತರದ ಮೇಲಿದೆ ಎಂದು ಭಾಗವತ ಪುರಾಣದಲ್ಲಿ ಹೇಳಿದೆ. ಸಾಮಾನ್ಯವಾಗಿ,

ಪುರಾಣವನ್ನು ಮಾತ್ರ ಓದಿಕೊಂಡವರು ಅಥವ ಭಾಗವತದ ವಾಕ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋದವರು, ಸೂರ್ಯನ ಮೇಲೆ ಒಂದು ಲಕ್ಷ ಯೋಜನ ದೆತ್ತರದಲ್ಲಿ ಚಂದ್ರನಿರುವುದರಿಂದ, ಈಗಿನವರು ಚಂದ್ರಲೋಕಕ್ಕೆ ಹೋಗಿ ಬಂದಿದ್ದಾರೆ ಎನ್ನುವ ಮಾತು ಸುಳ್ಳು ಎನ್ನುವರು. ನಿಜಸ್ಥಿತಿ ಅದಲ್ಲ, "ಏವಂ ಚಂದ್ರಮಾ ಅರ್ಕಗಭಸ್ತಿಭ್ಯಃ ಉಪರಿಷ್ಟಾತ್ ಲಕ್ಷಯೋಜನತಃ ಉಪಲಭ್ಯಮಾನಃ" ಎಂಬುದು ಶ್ರೀಮದ್ ಭಾಗವತದ ವಾಕ್ಯ, 'ಗಭಸ್ತಿ' ಎಂದರೆ ಕಿರಣ, ಆದುದರಿಂದ, ಚಂದ್ರನ ರಥದ ಪಥವು ಸೂರ್ಯಕಿರಣಗಳಿಗಿಂತ ಮೇಲೆ, ಒಂದು ಲಕ್ಷ ಯೋಜನ ದೆತ್ತರದಲ್ಲಿ ಇರುವುದೆಂದು ತಿಳಿಯ ಬೇಕೇ ಹೊರತು, ಸೂರ್ಯನ ನೆತ್ತಿಯ ಮೇಲಲ್ಲ.

ಧ್ರುವಮಂಡಲಕ್ಕಿಂತ ಕೆಳಗಿಳಿದು ಬರುವಾಗ, ಗಂಗಾ ಪ್ರವಾಹವು ಚಂದ್ರ ಮಂಡಲವನ್ನು ಆವರಿಸಿ, ನಂತರ ಮೇರು ಶಿಖರದ ಮೇಲೆ ಇಳಿಯಿತೆಂದು ಹೇಳಿರುವುದರಿಂದಲೂ, ಜಂಭೂದ್ವೀಪವನ್ನು ಸುತ್ತುಗಟ್ಟಿರುವ ಲವಣ ಸಮುದ್ರದಲ್ಲಿ ಚಂದ್ರ ಮಂಡಲಕ್ಕೆ ಸೇರಿದಂತೆ ಚಂದ್ರದ್ವೀಪವಿದೆಯೆಂದು ಹೇಳಿರುವುದರಿಂದಲೂ, ಚಂದ್ರನ ಪಥವು ಜಂಬೂ ದ್ವೀಪದಲ್ಲಿನ ನಮ್ಮ ಭರತ ಖಂಡಕ್ಕೆ 2–3 ಲಕ್ಷ ಮೈಲಿಗಳಷ್ಟು ಸಮೀಪದಲ್ಲಿಯೇ ಇರುವುದೆಂಬುದು ನಿಶ್ಚಯವಾಯಿತು. ಬುಟ್ಟಿಯಾಕಾರದ ಜಂಬೂ ದ್ವೀಪವು ಒಂದು ಲಕ್ಷ ಯೋಜನ ಎತ್ತರವುಳ್ಳದ್ದಾಗಿರುವುದರಿಂದಲೂ, ಆ ದ್ವೀಪದ ತಳಭಾಗವು ಪುಷ್ಕರ ದ್ವೀಪದ ನೆಲಕ್ಕಿಂತ ಒಂದು ಲಕ್ಷ ಯೋಜನದೆತ್ತರದಲ್ಲಿ ಇರುವುದರಿಂದಲೂ, ಭರತಖಂಡದ ಸಂಕ್ರಾಂತಿ ವೃತ್ತಗಳಿಗನುಸಾರವಾಗಿ ಸಂಚಾರವುಳ್ಳ ಸೂರ್ಯನ ನೇರಕಿರಣದ ಮೇಲೆ, ಒಂದು ಲಕ್ಷ ಯೋಜನದೆತ್ತರದಲ್ಲಿ ಚಂದ್ರ ಮಂಡಲವಿದ್ದ ಹಾಗಾಯಿತು. ಚಂದ್ರ ಚಲಿಸುವುದು, ನಮ್ಮ ಭೂಮಿಗೆ ಸಮೀಪವಾದ, ಕಾಲಚಕ್ರದ ಬೇರೊಂದು ಪಟ್ಟಿಯ ಮೇಲೆ. ಆದು ಕಾಲಚಕ್ರದ ಮುಖ್ಯ ಪಟ್ಟಿಗಿಂತ ಒಂದುಲಕ್ಷ ಯೋಜನದ ಮೇಲಿದೆ.]

ಸಂವತ್ಸರೇಣತು ಗುರುಃ ಪೃಷ್ಠರಾಶಿಂ ಸ್ಪೃಶೇತ್ಕಿಲ ।
ಶನಿರ್ವರ್ಷದ್ವಯೇನೈವ ಪೃಷ್ಠೇ ಪೃಷ್ಠೇಧಿಗಚ್ಛತಿ ॥೨೯೭॥
ಅತಿಮಂದಗತಿತ್ವಾಚ್ಚ ಶನೈಶ್ಚರ ಇತೀರಿತಃ ।
ಏವಂಗ್ರಹಾಣಾಂ ಸರ್ವೇಷಾಂ ಗತಿರ್ವಾಮೇತಿಕೀರ್ತ್ಯತೇ ॥೨೯೮॥
ಯಥಾಪಿಪೀಲಿಕಾ ಧಾರಾ ತೈಲಯಂತ್ರೇತ್ವರಾವತಿ ।
ಪೃಷ್ಠೇ ಪೃಷ್ಠೇ ಭವೇನ್ಮಂದಂ ಯಾಂತಿ ತದ್ವದ್ಗ್ರಹಾ ಇಮೇ ॥೨೯೯॥

ಗುರುಗ್ರಹವು ತನ್ನ ಹಿಂದೋಟದಿಂದ ಒಂದೊಂದು ರಾಶಿಯನ್ನು ಅತಿಕ್ರಮಿಸಲು ಒಂದೊಂದು ವರ್ಷ ಹಿಡಿಯುವುದು. ಅದೇ ರೀತಿಯಾಗಿ ಒಂದೊಂದು ರಾಶಿಯನ್ನು ಅತಿಕ್ರಮಿಸಲು ಶನಿಗ್ರಹಕ್ಕೆ ಎರಡೆರಡು ವರ್ಷ ಹಿಡಿಯುವುದು. ಹೀಗೆ ವಾಮಗತಿಯಲ್ಲಿ ಅತ್ಯಂತ ನಿಧಾನವಾಗಿ ತೋರುವುದರಿಂದ ಆ ಗ್ರಹಕ್ಕೆ ಶನೈಶ್ಚರ (ನಿಧಾನವಾಗಿ ಚಲಿಸುವವನು) ಎಂಬ ಹೆಸರು ಬಂದಿದೆ. ಈ ರೀತಿಯಾಗಿ, ಎಲ್ಲಾ ಗ್ರಹಗಳೂ ಕಾಲಚಕ್ರದ ಮೇಲೆ ಮುಂದುಮುಂದಕ್ಕೆ ಚಲಿಸುತ್ತಿದ್ದರೂ, ಅವುಗಳ ಕಡಿಮೆ ಕಡಿಮೆ ವೇಗಗಳ ಕಾರಣದಿಂದ. ಹಿಂದೆ ಹಿಂದೆ ಹೋದಂತೆ ಭಾಸವಾಗುವುದರಿಂದ ಅವು ಚಲಿಸುವಿಕೆಯನ್ನು 'ವಾಮಗತಿ' ಎಂದಿದ್ದಾರೆ. ಹೇಗೆ ತೈಲ ಯಂತ್ರದ ಚಕ್ರದ ಮೇಲೆ ಒಂದು ಇರುವೆಯು ಅದು ತಿರುಗುವ ದಿಕ್ಕಿನಲ್ಲಿಯೇ ಚಲಿಸುತ್ತಿದ್ದರೂ, ಪ್ರತಿಯೊಂದು ಸುತ್ತಿನಲ್ಲಿಯೂ ಹಿಂದೆ ಹಿಂದೆ ಬೀಳುವುದೋ ಅದರಂತೆ ಕಾಲಚಕ್ರದ ಪಟ್ಟಿಗಳ ಮೇಲೆ ಚಲಿಸುವ ಗ್ರಹಗಳೂ ಕೂಡ.

> ಯದಿ ಗ್ರಹರಥಾಸ್ಸರ್ವೇ ಗಚ್ಛೇಯುರ್ವಾಮ ಭಾಗತಃ ।
> ತರ್ಹಿಸೂರ್ಯೋದಯೇ ಸೂರ್ಯಃಪೃಷ್ಠಮೇವೇಕ್ಷ್ಯತೇ ನರೈಃ ॥೩೦೦॥
> ಅರ್ಘ್ಯಂ ಕಸ್ಯಕರೇದದ್ಯುರ್ಗಾಯತ್ರ್ಯಾಮಂತ್ರಿತೈರ್ಜಲೈಃ ।
> ಅತೋಽಸ್ಮಾದುಕ್ತ ಮಾರ್ಗೇಣೈವ ವಾಮಗತಿಂವದೇತ್ ॥೩೦೧॥
> ಸವ್ಯೇನ ದಕ್ಷಿಣೇನಾಪಿ ಸವಿತಾ ಕರುತೇಽಚಲಂ ।
> ಇತಿಮೂಲೋದಿತಾವಾಕ್ಯಾತ್ಸ್ಯಸೂಚಯದಿಮಾಂಪ್ರತಿ ॥೩೦೨॥
> ಸಾಕ್ಷಾದ್ವಾಮಗತೌಸವ್ಯದಕ್ಷಿಣತ್ವಂ ಕಥಂ ಗಿರೇಃ ।
> ಕಥಂಚಾಂತರ್ಗತಂ ವಿಷ್ಣುಂ ಶಿಂಶುಮಾರಮಮೀಸುರಾಃ ॥೩೦೩॥
> ಪರಿಭ್ರಮೇಯುಸ್ಸತತಮಪ್ರದಕ್ಷಿಣ ಯಾತ್ರಯಾ ।

ಒಂದು ವೇಳೆ, ಕೆಲವರ ಅನಿಸಿಕೆಯಂತೆ, ಗ್ರಹಗಳು ಹಿಂದೆ ಹಿಂದಕ್ಕೆ ಚಲಿಸುವುವೆಂದೇ ಭಾವಿಸುವುದಾದರೆ, ಸೂರ್ಯೋದಯ ಕಾಲದಲ್ಲಿ ಸೂರ್ಯನ ಮುಖಭಾಗವು ಕಾಣುವುದಕ್ಕೆ ಬದಲಾಗಿ ಪೃಷ್ಠ (ಬೆನ್ನಿನ) ಭಾಗವು ಕಾಣಬೇಕಾಗುವುದು. ಆಗ, ಗಾಯತ್ರೀಮಂತ್ರಪೂತವಾದ ಜಲದಿಂದ ಅರ್ಘ್ಯವನ್ನು ಯಾರ ಕೈಗೆ ಕೊಡಲು ಸಾಧ್ಯವಾದೀತು ? ಆದುದರಿಂದ 'ವಾಮಗತಿ' ಎಂಬ ಮಾತಿಗೆ ನಾವು ಹೇಳಿದಂತೆಯೇ ಅರ್ಥಮಾಡಬೇಕು. ಶ್ರೀಮದ್ಭಾಗವತ ಮೂಲದಲ್ಲಿ, ಸೂರ್ಯನು ಮೇರುಪರ್ವತ

ವನ್ನು ಬಲಕ್ಕೂ, ಎಡಕ್ಕೂ ಇಟ್ಟುಕೊಂಡು ತಿರುಗುವನೆಂದು ಹೇಳಿರುವುದು ಇವೇ ಅರ್ಥದಲ್ಲಿಯೇ. ಹಾಗಲ್ಲದೆ, ಗ್ರಹಾದಿಗಳು ಹಿಂಪೆ ಹಿಂದಕ್ಕೇ ಚಲಿಸುವುವೆಂದರೆ, ಆ ದೇವತೆಗಳು ಮೇರ್ವಂತರ್ಗತನಾಗಿಯೂ, ಆ ಪರ್ವತದ ಮೇಲೆಯೂ ಇರುವ ಶಿಂಶುಮಾರ ಮೂರ್ತಿಗೆ ಅಪಸವ್ಯದಿಂದ ಪ್ರದಕ್ಷಿಣೆ ಮಾಡುವರೆಂದು ಹೇಳಬಹುದೆ?

[ಕಾಲಚಕ್ರವು ಮೇರು ಪರ್ವತವನ್ನು ಪ್ರದಿಕ್ಷಿಣಾಕಾರವಾಗಿಯೇ ಸುತ್ತುವುದು. ಆ ಚಕ್ರದ ಬೇರೆ ಬೇರೆ ಪಟ್ಟಿಗಳ ಮೇಲೆ ಗ್ರಹಗಳೂ ಪ್ರದಕ್ಷಿಣಾಕಾರವಾಗಿಯೇ ಸುತ್ತುವುವು. ಹಾಗೆ ಸುತ್ತುವಾಗ ಮೇರು ಪರ್ವತವು ಅವುಗಳ ಬಲಗಡೆಗೇ ಇರು ವುದು. ಆದರೆ, ಅವು ಕಾಲಚಕ್ರದ ವೇಗಕ್ಕಿಂತ ಕಡಿಮೆ ಕಡಿಮೆ ವೇಗಗಳುಳ್ಳವು ಗಳಾಗಿ ಹಿಂದೆ ಹಿಂದೆ ಬೀಳುವಾಗ ಮೇರುಪರ್ವತವು ಅವುಗಳ ಎಡಗಡೆ ಇದ್ದಂತೆ ಆಗುವುದು. ಅಷ್ಟೇ ಹೊರತು, ಆ ಗ್ರಹಗಳು ಹಿಂದೆ ಹಿಂದಕ್ಕೆ ಚಲಿಸುವುದಿಲ್ಲ.]

ಅಕ್ಷಾಗ್ರ ಖಚಿತಾಚ್ಛೈಕಾತುಲಾಸ್ಥೂಲಾ ಹಿರಣ್ಮಯೀ ॥೩೦೪॥
ಧ್ರುವಮಂಡಲಸಂಲಗ್ನಾ ಕಾಲಚಕ್ರಂಚ ಬಿಭ್ರತೀ ।
ತೇನೈವ ಸಹ ಗಚ್ಛೇಚ್ಚ ನಚೇಚ್ಚಕ್ರಂ ಪತೇದ್ಧಿ ತತ್ ॥೩೦೫॥

ಕಾಲಚಕ್ರದ ಅಕ್ಷ ಅಥವ ಮಧ್ಯಸ್ಥಾನವೆನಿಸುವ ಮೇರುವಿನ ಮೇಲ್ಭಾಗ ದಿಂದ ಒಂದು ಗಟ್ಟಿಯಾದ ಸುವರ್ಣ ತೊಲೆಯು ಹೊರಟು, ಕಾಲಚಕ್ರದ ಮುಖ್ಯ ಪಟ್ಟಿಗೂ, ವಾಯುಪಾಶದಿಂದ ಧ್ರುವ ಸ್ಥಾನಕ್ಕೂ ಸಂಬಂಧಿಸಿರುವುದರಿಂದ, ಕಾಲ ಚಕ್ರದ ಯಂತ್ರವು ಕೆಳಗೆಬೀಳದೆ ನಿಂತಿದೆ. ಆ ತೊಲೆ (ಅಚ್ಚು) ಮತ್ತು ವಾಯು ಪಾಶದ ಸಹಾಯದಿಂದಲೇ ಅದು ತಿರುಗುತ್ತಿದೆ.

[ನ್ಯೂಟನ್ನನ ಗುರುತ್ವಾಕರ್ಷಣದ ವಿಷಯವನ್ನು ಮಾತ್ರ ತಲೆಯಲ್ಲಿಟ್ಟು ಕೊಂಡಿರುವ ಆಧುನಿಕರು ಈಗ ಹೇಳಿದ ವಿಷಯವನ್ನು ಸಾವಧಾನವಾಗಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬೇಕು.

ಭೂಮಂಡಲ ಮತ್ತು ಪಾತಾಳಾದಿ ಲೋಕಗಳ ಭಾರವನ್ನು ಅಷ್ಟದಿಗ್ಗಜಗಳು, ಆದಿಶೇಷ, ವಾಯುಕೂರ್ಮ – ಇವರು ಹೊತ್ತಿರುವರೆಂಬುದನ್ನು ಹಿಂದೆಯೇ ತಿಳಿಸ ಲಾಗಿದೆ. ಭೂಮ್ಯಾದಿ ಲೋಕಗಳನ್ನು ತಮ್ಮ ಸ್ಥಾನದಲ್ಲಿರುವಂತೆ ಹಿಡಿದು ನಿಲ್ಲಿಸಿ ರುವುದು ದಿಗ್ಗಜಗಳು ಮೊದಲಾದ ಶಕ್ತಿಗಳೆಂಬುದು, ಅವರು ಧರಿಸಿರುವರು ಎಂಬ

ಮಾತಿನ ಅರ್ಥ. ಗುರುತ್ವಾಕರ್ಷಣೆಯು ಮುಖ್ಯವಾಗಿರುವುದು ಆ ಶಕ್ತಿಗಳ ಕಡೆಗೆ ಎಂಬುದು ತಾತ್ಪರ್ಯ. ಇದೇ ಶಕ್ತಿಗಳು ವಿಷ್ಣುಕೂರ್ಮನಿಂದ ತಮ್ಮ ಸಾಮರ್ಥ್ಯ ವನ್ನು ಪಡೆದುಕೊಂಡಿವೆ. ಈ ಎಲ್ಲಾ ಶಕ್ತಿಗಳೂ ರೂಪಾಂತರಗಳಿಂದ, ಗುಪ್ತವಾಗಿ ಪ್ರತಿಯೊಂದು ಪಾರ್ಥಿವ ವಸ್ತುವಿನಲ್ಲಿಯೂ, ಪ್ರಾಣಿಗಳ ಶರೀರಗಳಲ್ಲಿಯೂ ಇರು ವುದರಿಂದಲೇ ಗುರುತ್ವಾಕರ್ಷಣ ಶಕ್ತಿಯೂ ನಾನಾರೂಪದಲ್ಲಿ ಪರಿಣಾಮಕಾರಿಯಾ ಗಿದೆ. ನ್ಯೂಟನ್ನಿನ ಊಹೆಗೆ ಈ ಆಧಾರದ ದೃಷ್ಟಿ ಇಲ್ಲದೆ ಅವನ ಊಹೆಯು ಅಪೂರ್ಣವಾದುದು. ]

ನಕ್ಷತ್ರಾಣಾಂಚರಾಶೀನಾಮುತ್ತರೋತ್ತರಗಾಮಿನಾಂ ।
ಪ್ರದಿಕ್ಷಿಣಾಗತಿಃ ಪ್ರೋಕ್ತಾ ಕಾಲಚಕ್ರ ನಿವಾಸಿನಾಮ್ ||೩೦೬||

ಗ್ರಹಗಳಂತೆ ರಾಶಿಗಳೂ ಇಪ್ಪತ್ತೇಳು ಗುಂಪುಗಳಾಗಿ ವಿಂಗಡಿಸಿ ಭಾವಿಸುವ ನಕ್ಷತ್ರಗಳೂ ಕಾಲಚಕ್ರವನ್ನು ಆಶ್ರಯಿಸಿಯೇ ಮೇರುವನ್ನು ಪ್ರದಕ್ಷಿಣೆಯಾಗಿ ಸುತ್ತುವುವು.

ಚತುಃಪಂಚಾದಿ ಘಟಿಕಾರೂಪರಾಶಿಸ್ಥದೇವತಾಃ ।
ಘಟಿಕಾಮಾನಿನಸ್ತಾವದ್ಯಾನ್ತೈರ್ಗಚ್ಛಂತಿ ಭಾಸ್ವರೈಃ ||೩೦೭||
ಮೇರುಂ ಪ್ರದಕ್ಷಿಣೀಕುರ್ವತ್ಕಾಲಚಕ್ರಸ್ಥಿತಾ ಅಪಿ ।
ಗ್ರಹಾಃಸ್ವಸ್ವರಥೈಸ್ತಸ್ಮಿನ್ ಗಚ್ಛಂತೋಽಪಿ ದಿನೇದಿನೇ ||೩೦೮||
ತದ್ವತ್ತ್ವರಾಯಾ ರಾಹಿತ್ಯಾತ್ಪೃಷ್ಠೇ ಪೃಷ್ಠೇ ಭವಂತಿ ಹಿ ।

ಕಾಲಚಕ್ರದ ಗತಿಯಿಂದ ನಿರ್ಣಯಿಸಲಾಗುವ ಘಳಿಗೆಗಳಿಗೆ ಕಾಲಾಭಿಮಾನಿ ಗಳಾದ ರಾಶಿಗಳಲ್ಲಿನ ದೇವತೆಗಳು ಕಾಲಚಕ್ರದ ಜೊತೆಗೇ ಮೇರುವಿಗೆ ಪ್ರದಕ್ಷಿಣೆ ಯಾಗಿ ಸುತ್ತುತ್ತಿರುವರು. ಗ್ರಹಗಳ ವೇಗಗಳು ರಾಶಿಗಳ ವೇಗಕ್ಕಿಂತ ಕಡಿಮೆ ಕಡಿಮೆಯಾದುದರಿಂದ ಅವು ರಾಶಿಗಳ ದೃಷ್ಟಿಯಿಂದ ಹಿಂದೆ ಹಿಂದೆ ಬೀಳುವುವು.]

### ರಾಹು ಕೇತುಗಳು

ಭೂಮೇರ್ನವತಿ ಸಾಹಸ್ರ ಯೋಜನೋತ್ತುಂಗ ವರ್ತ್ಮನಿ ||೩೦೯||
ಕಾಲಚಕ್ರಾದಿಧಾರಾಯಾಂ ರಾಹೋರ್ಮಂಡಲಮೀರಿತಂ ।
ತತ್ರೈವ ಕೇತುಶತಕಂ ರಾಹುಣಾಸಹ ತಿಷ್ಠತಿ ||೩೧೦||

ಚಕ್ರಚ್ಛಿನ್ನಂ ರಾಹುಶಿರೋ ಹರಿಣಾದ್ಭುತ ಕರ್ಮಣಾ ।
ಸುಧಾಪಾನಸ್ಯಸಾಮರ್ಥ್ಯಾದ್ಭಾಸ್ವರಂಚಾಪ್ಯನಶ್ವರಂ ॥೩೧೧॥

ಗ್ರಹಮಂಡಲತಾಮೇತ್ಯ ಸ್ಥಿತಂ ಕೇತುಶತಾನ್ವಿತಂ ।
ಉಪ್ರದ್ರವಾಯ ಲೋಕಾನಾಂ ಚಂದ್ರಸೂರ್ಯಗ್ರಹಾಯಚ ॥೩೧೨॥

ರಾಹೋರಂಶೋಪಿತತ್ರಾಲ್ಪೋ ವರ್ತತೇ ನ ಸಪೂಜ್ಯತೇ ।
ತನ್ನಾಮ್ನಾ ಯಾಜ್ಞಿಕೈರ್ದತ್ತಾ ಪ್ಯಾಹುತಿಸ್ತದ್ಗತೈಸ್ಸುರೈಃ ॥೩೧೩॥
ಹರಿಣೈವ ಹೃದಿಸ್ಥೇನ ಭುಜ್ಯತೇ ನತು ರಾಹುಣಾ ।

ಭೂಮಾನದಿಂದ 90,000 ಯೋಜನಗಳ ಮೇಲೆ (ಸೂರ್ಯಪಥಕ್ಕಿಂತಲೂ 10,000 ಯೋಜನದ ಕೆಳಗೆ) ಇರುವ ಕಾಲಚಕ್ರದ ಅತ್ಯಂತ ಕೆಳಗಿನ ಪಟ್ಟಿಯ ಮೇಲೆ ರಾಹುಮಂಡಲವಿದೆ. ಅದೇ ಮಂಡಲದಲ್ಲಿ, ರಾಹುವಿನ ಜೊತೆಯಲ್ಲಿಯೇ ನೂರುಬಾಲಗಳಂತಿರುವ ಕೇತುಗ್ರಹವೂ ಇದೆ. ದೇವತೆಗಳ ಇಷ್ಟಾಪೂರ್ತಿಮಾಡಲು ಮೋಹಿನೀ ರೂಪಧರಿಸಿ ಅದ್ಭುತ ಕರ್ಮನಡೆಸಿದ ಶ್ರೀ ಹರಿಯಿಂದ ರಾಹುವಿನ ತಲೆ ಕತ್ತರಿಸಿ ಹೋಯಿತು. ಆದರೂ ಅಮೃತಪಾನದ ದೆಸೆಯಿಂದ ಅದು ನಾಶಹೊಂದದೆ, ತನ್ನದೇ ಆದ ಕಾಂತಿಯಿಂದ ಇರುತ್ತಿದೆ; ಗ್ರಹಮಂಡಲವನ್ನು ಸೇರಿ, ಕೇತುಸಹಿತ ವಾಗಿದೆ. ಈ ಗ್ರಹಗಳೆರಡು ಅಲ್ಲಿರುವುದು ಚಂದ್ರಸೂರ್ಯರಿಗೂ, ತನ್ಮೂಲಕ ಲೋಕದ ಜೀವರಿಗೂ ಉಪಟಳವನ್ನುಂಟು ಮಾಡುವುದಕ್ಕಾಗಿ. ಆ ಗ್ರಹಗಳಲ್ಲಿ ರಾಹು ಕೇತುಗಳೆಂಬ ಜೀವರ ಅಂಶಗಳ ವ್ಯಾಪ್ತಿಯು ಅತ್ಯಲ್ಪವಾಗಿದೆ. ಆದುದ ರಿಂದ ಪೂಜಿಸುವವರು ರಾಹುಕೇತುಗಳ ಹೆಸರಿನಲ್ಲಿ ಅರ್ಪಿಸುವ ಪೂಜಾದ್ರವ್ಯಗಳನ್ನು ಅದೇ -ಹೆಸರುಗಳಿಂದ ಅಲ್ಲಿರುವ ದೇವತೆಗಳು ಸ್ವೀಕರಿಸಿ ಫಲಪ್ರದರಾಗುತ್ತಾರೆ. ಶ್ರೀ ಹರಿಯು ಸರ್ವರಂತರ್ಯಾಮಿಯಾಗಿರುವುದರಿಂದ, ನಿಜವಾಗಿ ಪೂಜೆಯನ್ನು ಸ್ವೀಕರಿಸಿ ಫಲಕೊಡುವವನು ಅವನೇ ಎಂದು ತಿಳಿಯಬೇಕು.

ಲಕ್ಷಯೋಜನತೋಪ್ಯೂರ್ಧ್ವಂ ಚಕ್ರಧಾರಂತರೋಪರಿ ॥೩೧೪॥
ರವಿಃಪರ್ಯೇತಿ ಸುಹಸಾ ಭಾಸಯನ್ಸರ್ವತೋದಿಶಂ ।

ತತೋಪಿ ಲಕ್ಷಾದೂರ್ಧ್ವಂತು ಚಕ್ರಧಾರಾಂತರೋಪರಿ ॥೩೧೫॥
ಸ್ವಸ್ವರಾಶಿಗತೋ ನಿತ್ಯಂ ಶಶೀಪರ್ಯೇತಿ ಸರ್ವದಾ ।

ಪೂರ್ಣಮಂಡಲತಾಯಾಂತು ಸೂರ್ಯಾದ್ಭಾಗಾಂತರೇವ್ರಜೇತ್ ॥೩೧೭.॥
ಸೂರ್ಯೇಂದು ಕಲಯೋರೇಕ ರಾಶೌಯೋಗೋ ಭವೇದ್ಯದಾ ।

ದರ್ಶಮಾಹುಃ ತದಾರಾಹೋರಪ್ಯಧಃ ಸೂರ್ಯಮಂಡಲಾತ್ ॥೩೧೭॥
ಯದ್ಯೇಕ ರಾಶೌಯೋಗಸ್ಸ್ಯಾತ್ತದಾಹುರ್ಗ್ರಹಣಂ ಬುಧಾಃ ।

ಅಧೋವಾಪ್ಯೂರ್ಧ್ವದೇಶೇವಾ ರಾಶೇಃ ಸಾಮ್ಯೇನಯಾಗತಿಃ ॥೩೧೮॥
ಸಏವ ಯೋಗಃ ಸರ್ವೇಷಾಂ ನತ್ವೇಕತ್ರ ಸಹಸ್ಥಿತಿಃ ।

ಊರ್ಧ್ವಾಧೋ ಗಾಮಿನಾಂ ತೇಷಾಂ ಕಥಮೇಕತ್ರ ಸಂಗಮಃ ॥೩೧೯॥
ಪಂಚಗ್ರಹಾದಿ ಯೋಗಂಚಾಪ್ಯೇವ ಮಾಹುರ್ವಿಚಕ್ಷಣಾಃ ।

ಭೂಮಾನದಿಂದ ಲಕ್ಷಯೋಜನದ ಮೇಲೆ (ರಾಹು ಮಂಡಲಕ್ಕಿಂತ 10,000 ಯೋಜನದ ಮೇಲೆ), ಕಾಲಚಕ್ರದ ಬೇರೊಂದು ಪಟ್ಟಿಯ ಮೇಲೆ, ದಿಕ್ಕುಗಳನ್ನು ತನ್ನ ತೇಜಸ್ಸಿನಿಂದ ಬೆಳಗುತ್ತಾ ಸೂರ್ಯನು ಸಂಚರಿಸುತ್ತಾನೆ. ಇನ್ನೂ ಒಂದು ಲಕ್ಷಯೋಜನದೆತ್ತರದಲ್ಲಿ, ಇನ್ನೊಂದು ಪಟ್ಟಿಯ ಮೇಲೆ, ಆಯಾಕಾಲಕ್ಕೆ ತಕ್ಕಂತೆ ರಾಶಿಗಳನ್ನು ಮುಟ್ಟುತ್ತಾ ಚಂದ್ರನು ಸಂಚರಿಸುತ್ತಾನೆ. ಹುಣ್ಣಿಮೆಯ ದಿನಗಳಲ್ಲಿ, ಚಂದ್ರನು, ತನ್ನ ಪಟ್ಟಿಯ ಮೇಲೆ ಸೂರ್ಯನಿಗೆ ಅಭಿಮುಖವಾಗಿರುತ್ತಾನೆ. ಸೂರ್ಯಚಂದ್ರರು ಒಂದೇ ಕಡೆಗೆ ತಮ್ಮ ತಮ್ಮ ಸ್ಥಾನಗತರಾಗಿ ಸಂಧಿಸಿದಾಗ ಅಮಾವಾಸ್ಯೆಯ ದಿನವಾಗುವುದು. ಅದೇ ಸಮಯದಲ್ಲಿ, ಸೂರ್ಯಮಂಡಲಕ್ಕಿಂತಲೂ ಕೆಳಗಿರುವ ರಾಹುವು ಅದೇ ರೇಖಾಂಶಕ್ಕೆ ಒಂದು ಸೇರಿದರೆ, ಎಂದರೆ, ಮೂರು ಗ್ರಹಗಳೂ ಏಕರಾಶಿಗತರಾಗಿ ಒಂದೇ ರೇಖಾಂಶವನ್ನು ಮುಟ್ಟಿದಾಗ, ಗ್ರಹಣವು ಸಂಭವಿಸುತ್ತದೆ. ಈ ಗ್ರಹಗಳು ತಮ್ಮ ತಮ್ಮ ಪಟ್ಟಿಗಳ ಮೇಲಿದ್ದು, ಒಂದಕ್ಕಿಂತ ಇನ್ನೊಂದು ಮೇಲೆ ಅಥವ ಕೆಳಗೆ ಇರುವುದಲ್ಲಸೆ, ಮೂರೂ ಒಂದೇ ಎತ್ತರದಲ್ಲಿ ಸಂಧಿಸುವುದಿಲ್ಲ. ರೇಖಾಂಶದ ದೃಷ್ಟಿಯಿಂದ ಅವು ಏಕತ್ರ ಇರುವುವೇ ಹೊರತು, ಎತ್ತರದಲ್ಲಿ ಪಕ್ಕಪಕ್ಕದಲ್ಲಿ ಅಲ್ಲ. ಬೇರೆ ಬೇರೆ ಪಟ್ಟಿಗಳ ಮೇಲೆ ಸಂಚರಿಸುವ ಆ ಗ್ರಹಗಳು ಅಡ್ಡಲಾದ ಒಂದೇ ಸಮತಲದಲ್ಲ ಎದುರು ಬದರಾಗುವುದಿಲ್ಲ. ಪಂಚಗ್ರಹ ಯೋಗವೆಂಬುದು ಸಂಭವಿಸುವುದೂ ರೀತಿಯಲ್ಲಿ

[ನಮ್ಮ ಜನ, ರಾಹು ಕೇತುಗಳನ್ನೂ, ಸೂರ್ಯನನ್ನೂ ನವಗ್ರಹಗಳಲ್ಲಿ ಭಾವಿಸಿ ಪೂಜಿಸುತ್ತಾರೆ. ಆದರೆ, ಆಧುನಿಕ ವಿದ್ಯಾಭ್ಯಾಸದ ಭಾವನೆಗಳಿಗೆ ಒಳಗಾಗಿ,

ಭೂಮಿಯನ್ನು ಗ್ರಹಗಳ ಗುಂಪಿನಲ್ಲಿ ಕೂಡಿಸುತ್ತಾರೆ; ರಾಹು ಕೇತುಗಳೆಂಬ ಗ್ರಹಗಳೇ ಇಲ್ಲವೆಂತಲೂ, ಅವು ಸೂರ್ಯ ಚಂದ್ರ ಪಥಗಳ ಛೇದಕ ಸ್ಥಾನಗಳೆಂದೂ ತಿಳಿದಿರುತ್ತಾರೆ, ಇದು ಸರಿಯಲ್ಲ.

ರಾಹು ಕಪ್ಪುಬಣ್ಣದ ಗ್ರಹ. ಕೇತು, ಕಂದು ಬಣ್ಣದ ಗ್ರಹ. ಚಂದ್ರ ಗ್ರಹಣ ಸಂಭವಿಸಿದಾಗಲೆಲ್ಲಾ, ರಾಹುಗ್ರಸ್ತವಾದಾಗ ಕಪ್ಪುಛಾಯೆ ಬಿದ್ದಿರುವುದನ್ನೂ, ಕೇತುಗ್ರಸ್ತವಾದಾಗ ಕಂದುಬಣ್ಣದ ಛಾಯೆ ಬಿದ್ದಿರುವುದನ್ನೂ ಯಾರು ಬೇಕಾದರೂ ಬರಿಗಣ್ಣಿನಿಂದ ಪರೀಕ್ಷಿಸಿ ತಿಳಿಯಬಹುದು. ಈ ಗ್ರಹಗಳು ಸೂರ್ಯನಿಂದ ಅಥವ ಚಂದ್ರನಿಂದ ನಮ್ಮ ಕಡೆಗೆ ಬರುವ ಕಿರಣಗಳನ್ನು ತಮ್ಮ ಕಪ್ಪು ಅಥವ ಕಂದು ಬಣ್ಣದ ಕಿರಣಗಳಿಂದ ಮುಚ್ಚಿದಾಗ ಅಥವಾ, ಆ ಕಿರಣಗಳನ್ನು ನುಂಗಿದಾಗ (ಗ್ರಾಸ ಮಾಡಿದಾಗ) ಗ್ರಹಣ ಸಂಭವಿಸುತ್ತದೆ. ಈಗಿನವರು ಹೇಳುವಂತೆ ಭೂಮಿ–ಸೂರ್ಯರ ನಡುವೆ ಚಂದ್ರನಾಗಲೀ, ಚಂದ್ರ–ಸೂರ್ಯರ ನಡುವೆ ಭೂಮಿಯಾಗಲೀ ಬಂದು ನಿಲ್ಲುವುವೆಂದು ಹೇಳುವುದು ಸರಿಯಲ್ಲ.]

ತ್ರಿಂಶಲ್ಲಕ್ಷೋಪರಿ ವಿಧೋರ್ನಕ್ಷತ್ರ ಗತಿರೀರಿತಾ ॥೩೨೦॥
ಮಧ್ಯಧಾರಾಸು ಗಂಧರ್ವ ಸಿದ್ಧಾದ್ಯಾಃ ಪುಣ್ಯಕರ್ಮಿಣಃ ।
ಭಾಸ್ವದ್ವಿಮಾನ ಕೋಟಿಸ್ಥಾ ರಮನ್ತೇಸಸ್ತ್ರಿಯಃ ಸದಾ ॥೩೨೧॥
ಷಡ್ರಸಾನ್ನಾನಿ ಭುಂಜಾನಾಃ ಫಲಾನಿ ವಿವಿಧಾನಿ ಚ ।
ಪಿಬಂತಶ್ಚ ವಿಯದ್ಗಂಗಾ ತೋಯಂ ಸ್ವಾದುಚ ಶೀತಲಂ ॥೩೨೨॥
ಗಾಯಂತಶ್ಚೈವ ನೃತ್ಯಂತಃ ಕ್ರೀಡಂತಃ ಪರಿತಃ ಕಿಲ ।
ತಾರಾರೂಪೇಣ ತದ್ಯಾನಾನ್ಯಸಂಖ್ಯಾನಿ ಭುವಿಸ್ಥಿತೈಃ ॥೩೨೩॥
ನರೈರದ್ಯಾಪಿ ದೃಶ್ಯಂತೇ ಜ್ಯೋತಿಶ್ಚಕ್ರಂತತೋವಿದುಃ ।
ತಾರಾಚಂದ್ರಮಸೋರ್ಮಧ್ಯೇ ರಾಶೀನಾಂತು ಗತಿಃಸ್ಮೃತಾ ॥೩೨೪॥

[ಚಂದ್ರಮಂಡಲದ ಮೇಲೆ 30 ಲಕ್ಷ ಯೋಜನದ ವರೆಗೆ ನಕ್ಷತ್ರಗಳ ಸಂಚಾರವೆಂದು 320 ನೇ ಶ್ಲೋಕದಿಂದ ಅರ್ಥವಾಗುತ್ತದೆ. ಹಾಗೆ ಅರ್ಥಮಾಡಿದರೆ ನಕ್ಷತ್ರಗಳ ಹರಹಿಗೂ ಧ್ರುವ ಮಂಡಲಕ್ಕೂ ನಡುವೆ ಕೇವಲ ಐದು ಲಕ್ಷ ಯೋಜನಗಳ ಅಂತರ ವಿದ್ದಂತಾಗುವುದು ಆ ಅಂತರವು 14 ಲಕ್ಷ ಯೋಜನವೆಂದು



"Solar and lunar eclipses, Sun's *rays or moon's rays* cut off by the black jet proceeding from Rahu".

328 ನೇ ಶ್ಲೋಕದಲ್ಲಿ ಹೇಳಿರುವುದರಿಂದ, 'ತ್ರಿಂಶತ್' ಎಂಬುದನ್ನು 'ವಿಂಶತ್' ಎಂಬುದಾಗಿ ತಿದ್ದಿಕೊಳ್ಳಬೇಕಾಗುವುದು. 'ತ್ರಿಂಶತ್' ಎಂಬುದು 'ಮುದ್ರಾರಾಕ್ಷಸ' ನಿರಬಹುದು.]

ಭೂಮಾನದಿಂದ ಎರಡು ಲಕ್ಷ ಯೋಜನದ ಮೇಲೆ ಚಂದ್ರನ ಮಂಡಲ ಅಥವ ಪಥವು ಇರುವುದು. ಅದರ ಮೇಲೆ 20 ಲಕ್ಷ ಯೋಜನದವರೆಗೆ ನಕ್ಷತ್ರಗಳ ಸಮೂಹಗಳಿರುವುವು. ಈ ನಕ್ಷತ್ರಗಳಲ್ಲಿ ಸಪ್ತರ್ಷಿಗಳನ್ನು ಬಿಟ್ಟರೆ, ಉಳಿದವುಗಳೆಲ್ಲಾ ನಕ್ಷತ್ರರೂಪದಲ್ಲಿರುವ ದೇವಯಾನಗಳೆಂದೂ, ಅವುಗಳು ತಾರೆಗಳೆಂದು ಕರೆಸಿಕೊಳ್ಳುವುವೆಂದೂ ಈ ಗ್ರಂಥಭಾಗದಿಂದಲೇ ತಿಳಿದು ಬರುತ್ತದೆ.

ಈ ಇಪ್ಪತ್ತು ಲಕ್ಷ ಅಂತರದ ಮಧ್ಯಧಾರೆಗಳ (ಪಟ್ಟಿಗಳ) ಮೇಲೆ ಗಂಧರ್ವರು, ಸಿದ್ಧರು ಮೊದಲಾದ ಪುಣ್ಯಜೀವಿಗಳು ನಕ್ಷತ್ರರೂಪದಲ್ಲಿ ಹೊಳೆಯುವ ಕೋಟಿ ಕೋಟಿ ದಿವ್ಯ ವಿಮಾನಗಳಲ್ಲಿ ತಮ್ಮ ಸ್ತ್ರೀಯರೊಂದಿಗೆ ವಿಹರಿಸುತ್ತಾರೆ. ಅವರು ಷಡ್ವಿಧರಸಾನ್ನಗಳನ್ನು ಭುಂಜಿಸುತ್ತಾ, ಬಗೆ ಬಗೆಯ ಫಲಗಳನ್ನು ಭಕ್ಷಿಸುತ್ತಾ, ಆಕಾಶಗಂಗೆಯ ರುಚಿಕರವೂ ಶೀತಲವೂ ಆದ ಜಲವನ್ನು ಪಾನ ಮಾಡುತ್ತಾ, ಆಡುತ್ತಾ ಪಾಡುತ್ತಾ, ಸಂತೋಷವಾಗಿ ಕಾಲಯಾಪನೆ ಮಾಡುತ್ತಾರೆ. ಅವರ ದೇವಯಾನಗಳು ನಕ್ಷತ್ರರೂಪದಲ್ಲಿ ಸಂಚರಿಸುತ್ತಿರುವುದು ಇಲ್ಲಿನ ಜನರ ಕಣ್ಣಿಗೆ ಸದಾ ಗೋಚರಿಸುತ್ತಿವೆ. ಈ ತಾರಾ ಸಮೂಹಗಳ ಪಥಗಳಿಗೂ ಚಂದ್ರಪಥಕ್ಕೂ ನಡುವೆ ರಾಶಿಗಳ ಸಂಚಾರ ಪಥಗಳಿರುವುವು.

[ಈಗಿನ ವಿಜ್ಞಾನಿಗಳು ಕೇವಲ ಭೌತಿಕವಾದ, ಅತ್ಯಂತ ಸ್ಥೂಲವಾದ, ತಮ್ಮ ಮಾನದಂಡಗಳಿಂದ ವಿಶ್ವದ ಎಲ್ಲಾ ವಿಚಾರಗಳನ್ನೂ ತಿಳಿಯಲು ಹೊರಟಿರುವುದರಿಂದ, ಈ ತಾರಾಲೋಕದ ವಿಚಾರವನ್ನು ಅವರು ಸರಿಯಾಗಿ ಅರ್ಥಮಾಡಿಕೊಳ್ಳದವರಾಗಿದ್ದಾರೆ. ತೇಜಸ್ತತ್ವದ ಸೂಕ್ಷ್ಮರೂಪಗಳನ್ನೂ, ದೈವೀ ವ್ಯಾಪಾರಗಳನ್ನೂ ಅವರು ಗಮನಕ್ಕೆ ತಂದುಕೊಳ್ಳದಿರುವುದು ಅವರ ತಪ್ಪು.]

ಲಕ್ಷದ್ವಯೋರ್ಧ್ವಮೃಕ್ಷೇಭ್ಯೋ ಹ್ಯುಶನಾ ಹ್ಯುಶನ ಸೋಗತಿಃ ।
ತತೋಲಕ್ಷದ್ವಯಾದೂರ್ಧ್ವಂ ಬುಧಸ್ಯಗತಿರೀರಿತಾ ॥೨೨೫॥
ತಸ್ಮಾಲ್ಲಕ್ಷದ್ವಯಾದೂರ್ಧ್ವಂ ಕುಜಸ್ಯಾಹುರ್ಗತಿಂ ಬುಧಾಃ ।

ಅನಂತರಂ ಸುರಗುರೋರ್ಗತಿರ್ಲಕ್ಷದ್ವಯೋಪರಿ ॥೩೨೬॥
ಶನೈಶ್ಚರಸ್ಯಾಪಿ ಗತಿಃಕಿಲ ಲಕ್ಷದ್ವಯೋಪರಿ ।
ಏಕಾದಶೇಭ್ಯೋಲಕ್ಷೇಭ್ಯೋಪ್ಯೂರ್ಧ್ವಂ ಸಪ್ತರ್ಷಿಮಂಡಲಂ ॥೩೨೭॥
ತದಂತರಾ ಯೋಜನಾನಾಂ ಲಕ್ಷಾಣ್ಯಾಹು ಚತುರ್ದಶ ।
ಸಪ್ತರ್ಷಿ ಮಂಡಲಾದೂರ್ಧ್ವಂ ಧ್ರುವಸ್ಯಕಿಲ ಮಂಡಲಂ ॥೩೨೮॥

ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರ ಸಮೂಹಗಳ ಸಂಚಾರ ಪಥ ಮೂಲಕ್ಕಿಂತ ಎರಡು ಲಕ್ಷ ಯೋಜನದ ಮೇಲೆ ಶುಕ್ರಗ್ರಹದ ಸಂಚಾರ. ಅದಕ್ಕಿಂತ ಎರಡು ಲಕ್ಷ ಯೋಜನದ ಮೇಲೆ ಬುಧಗ್ರಹ ಸಂಚಾರ. ಇನ್ನೂ ಎರಡು ಲಕ್ಷ ಯೋಜನದ ಮೇಲೆ ಮಂಗಳ ಗ್ರಹ. ಅದಕ್ಕಿಂತ ಎರಡು ಲಕ್ಷ ಯೋಜನದ ಮೇಲೆ ಬೃಹಸ್ಪತಿ (ಗುರು). ತದನಂತರ ಎರಡು ಲಕ್ಷದ ಮೇಲೆ ಶನಿಗ್ರಹ. ಅಲ್ಲಿಂದ ಹನ್ನೊಂದು ಲಕ್ಷ ಯೋಜನದಂತರದ ಮೇಲೆ ಸಪ್ತರ್ಷಿಮಂಡಲವಿದೆ. ಇನ್ನೂ ಹದಿನಾಲ್ಕು ಲಕ್ಷದ ಮೇಲೆ ಧ್ರುವಮಂಡಲ ಸ್ಥಾನ.

['ಧ್ರುವಮಂಡಲ' ಎಂಬ ಪದ, ಇಲ್ಲಿ ಗಮನಾರ್ಹವಾದುದು. ಧ್ರುವ ನಕ್ಷತ್ರವು ಸ್ಥಿರವೆನಿಸಿದರೂ ತನ್ನದೇ ಆದ ಸಣ್ಣಮಂಡಲವೊಂದನ್ನು ಆ ನಕ್ಷತ್ರವು ಹೊಂದಿದೆಯೆಂದೂ, ಅದು ಇತರ ಗ್ರಹನಕ್ಷತ್ರಗಳಂತೆ ಬೇರೊಂದು ಕೇಂದ್ರ ವಸ್ತುವಿಗೆ ಪ್ರದಕ್ಷಿಣೆಯಾಗಿ ಸುತ್ತುವುದಿಲ್ಲವೆಂದೂ ಇದರಿಂದ ತಿಳಿದು ಬರುತ್ತದೆ.]

ಏಷಾಂಗ್ರಹಾಣಾಂ ಸರ್ವೇಷಾಂ ಸದಾ ಸಂಚರತಾಂ ಕಿಲ ।
ಅಗ್ರೇಗಾಯಂತಿ ಗಂಧರ್ವಾನೃತ್ಯಂತ್ಯಪ್ಸರಸಃ ಸದಾ ॥೩೨೯॥

ಗಂಧಪುಷ್ಪಾನ್ನ ಪಾನಾದಿ ಭೋಗಾಂಶ್ಚ ಸ್ಯುಃ ಪದೇಪದೇ ।
ಮಂತ್ರಾಂಶ್ಚ ವಿವಿಧಾನೇಷಾಂ ಭುವಿಸ್ಥಾ ದ್ವಿಜಪುಂಗವಾಃ ॥೩೩೦॥

ಪಠಂತಿ ಪ್ರಣಮಂತ್ಯೇನಾನ್ ಹೋಮೇ ಹೋಮೇಚ ಜುಹ್ವತಿ ।
ಸತಾಂಶುಭಫಲಂ ದದ್ಯುರಸತಾಂ ಚ ವಿಪರ್ಯಯಂ ॥೩೩೧॥

ಕಾಲಚಕ್ರೋಚ್ಛ್ರಯಸ್ತ್ವೇವಂ ವಿಸ್ತರಸ್ತಸ್ಯ ಕೀರ್ತಿತಃ ।
ಕ್ಷೀರಾಬ್ಧಿಂಪರಿತಃ ಪುಷ್ಕರಾಖ್ಯೇ ದ್ವೀಪೇ ಮನೋರಮೇ ॥೩೩೨॥

ಮಾನಸೋತ್ತರ ಶೈಲೋಸ್ತಿ ಚತುರ್ದಿಕ್ಷ್ವಪಿ ಭಾಸ್ವರಃ ।
ತದಂತರ ಪ್ರದೇ ಶೋಪಿ ಕೋಟಿದ್ವಂದ್ವೇನ ವಿಸ್ತೃತಃ ॥೩೩೩॥

ಪಂಚಾಶಲ್ಲಕ್ಷ ಸಹಿತ ಲಕ್ಷಯೋಜನ ತೋಪಿಜ ।
ಸಂಚರಂತ್ಯತ್ರ ಸರ್ವತ್ರ ಜ್ಯೋತಿಶ್ಚಕ್ರ ಮಹರ್ನಿಶಂ ॥೩೩೪॥

ತಾವತ್ಪ್ರಮಾಣಂ ವಿಜ್ಞೇಯಂ ವಿದ್ವದ್ಭಿರ್ನ್ಯಾಯ ಕೋವಿದೈಃ ।
ವ್ಯೋಮ್ನೋಪರಾಬ್ಧಿ ದ್ವಾರೇಣ ಪಾತಾಳಂಪ್ರವಿಶನ್ನಿ ನಃ ॥೩೩೫॥

ಪೂರ್ವಾಂಬುಧಾವುದೇತೀತಿ ಕೇಚಿದಾಹುರಕೋವಿದಾಃ ।
ವೇದವಾದವಿರೋಧಿತ್ವಾನ್ನ ತನ್ಮತಮನುವ್ರಜೇತ್ ॥೩೩೬॥

ಉದಯಾಸ್ತಗಿರೀ ಯಸ್ಮಾತ್ಕಿಂಚಿನ್ಮೇರೋರಧಃ ಸ್ಥಿತೌ ।
ತತ್ರಾವರ್ತೀರ್ಯಚಕ್ರಂ ತತ್ಪ್ರನರ್ಯಂತ್ರ ಪ್ರಭಾವತಃ ॥೩೩೭॥

ತೈಲಯಂತ್ರವದುದ್ಭಾತಿ ತದ್ಭ್ರಾಂತಿರ್ಮಂದಚಕ್ಷುಷಾಂ ।
ಪಾತಾಳೇಪ್ಯಪರಂ ಚಕ್ರಂ ಸೂರ್ಯಾಚಂದ್ರಮಸೋಃ ಕಿಲ ॥೩೩೮॥

ಊರ್ಧ್ವಾಧೋಗಮನಂತಸ್ಯ ಭಾರತೇಪಿ ಸಮೀರಿತಂ ।
ಯೋಜನಾಯುತ ವಿಸ್ತಾರ ಪಾತಾಳೇ ತಿಗ್ಮದೀಧಿತೇಃ ॥೩೩೯॥

ಉದಯೇಸತಿ ತತ್ರತ್ಯಾನ್ ದಿವಾತಾಪೇನ ಮೂರ್ಛಿತಾನ್ ।
ನಿಶಿಶೀತಾಂಶು ಕಿರಣಾ ಜೀವಯಂತಿ ಪುನಃಪುನಃ ॥೩೪೦॥
ತತೋವಾ ಭ್ರಾಂತಿರೇತೇಷಾಂ ರಜ್ಜೌ ಭುಜಗ ಬುದ್ಧಿ ವತ್ ।
ಅತಃಶ್ರುತಿಃ ಸೂರ್ಯಗತಿಮಾಹೋಹನ್ನುತ್ತರಾಂ ದಿವಂ ॥೩೪೧॥

ಇತ್ಯಾಹ ತೇನ ವ್ಯಾಸೋಕ್ತಿರೇವ ಮಾನ್ಯಾನ ಚಾಪರಂ ।
ವೇದವ್ಯಾಸಃಸಭಗವಾನ್ಸಾಕ್ಷಾ ನ್ನಾರಾಯಣಃ ಕಿಲ ॥೩೪೨॥

ಕಿಂಚಸಪ್ತರ್ಷಿಗಮನಂಮಂಡಲಾಕಾರತಃ ಸ್ಥಿತಂ ।
ಅದ್ಯಾಪಿ ದೃಶ್ಯತೇ ಸರ್ವೈರ್ಜ್ಯೋತಿಶ್ಚಕ್ರಾಗ್ರಗಾಹಿತೇ ॥೩೪೩॥
ಅತೋಜ್ಯೋತಿಶ್ಚಕ್ರಮಿಂದಂ ಮೇರುಂ ಕನಕ ಪರ್ವತಂ ।
ಪ್ರದಕ್ಷಿಣೀ ಕೃತ್ಯಸದಾ ಜಗದ್ಭಾಸಯತೇ ಧ್ರುವಂ ॥೩೪೪॥

ತಪ್ಪು ತಿಳಿವಳಿಕೆಯಿಂದ ಕೆಲವರು, ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿ ಪೂರ್ವಸಮುದ್ರದಲ್ಲಿ ಏಳುವನು (ಉದಯಿಸುವನು) ಎಂದು ಹೇಳುವರು.

ಇದೇ ಸೂರ್ಯನು ಪಾತಾಳ ಲೋಕಕ್ಕಿಳಿದು ಮತ್ತೆ ಮೇಲೆ ಬರುವನೆಂಬುದು ಅವರ ಅಭಿಪ್ರಾಯ. ವೈದಿಕ ವಾಕ್ಯಗಳಿಗೆ ಅದು ವಿರೋಧವಾಗಿರುವುದರಿಂದ ಅದು ಒಪ್ಪತಕ್ಕ ಮಾತಲ್ಲ. ನಮ್ಮ ದೃಷ್ಟಿಯಿಂದ, ಉದಯಾಸ್ತ ಪರ್ವತಗಳು ಮೇರು ಮೂಲಕ್ಕಿಂತ ಸ್ವಲ್ಪಕೆಳಗಿರುವುದರಿಂದ, ತೈಲಯಂತ್ರದಂತೆ ಕಾಲಚಕ್ರವು ಕೆಳಕ್ಕಿಳಿದು ಮೇಲಕ್ಕೇರುವುದೆಂದು, ದೃಷ್ಟಿ ದೋಷ ನಿಮಿತ್ತದಿಂದ ಹೇಳುವರು ಪಾತಾಳ ಲೋಕದಲ್ಲಿಯೂ ಬೇರೊಂದು ಕಾಲಚಕ್ರವಿರುವುದೆಂದೂ, ಅದೂ ಕೂಡ ಏರಿಳಿತಗ ಳನ್ನು ಹೊಂದಿರುವುದೆಂದೂ ಮಹಾಭಾರತದಲ್ಲಿ ಹೇಳಿದೆ. ಸೂರ್ಯೋದಯವಾದಾಗ, ಪ್ರಖರಕಿರಣಗಳ ತಾಪದಿಂದ ಅಲ್ಲಿನ ನಿವಾಸಿಗಳು ಮೂರ್ಛಿತರಾಗುತ್ತಾರೆ; ರಾತ್ರಿ ಚಂದ್ರೋದಯವಾದಾಗ ಅತಂಪಿನಿಂದ ಮತ್ತೆ ಎಚ್ಚರ ಹೊಂದುವರು. ಹೀಗೆ ಎರಡು ಕಾಲ ಚಕ್ರಗಳ ವಿಚಾರ ಬಂದಿರುವುದರಿಂದ, ಅದು ಹಗ್ಗವನ್ನು ಹಾವೆಂದು ಭ್ರಮಿಸುವಂತೆ ತಪ್ಪು ತಿಳವಳಿಕೆಗೆ ಕಾರಣವಾಗಿದೆ. ಹೀಗಿರುವುದರಿಂದ, ಕಾಲ ಚಕ್ರವು ಉತ್ತರದ ಕಡೆಗೆ ಮೇಲೇರಿ ಕೆಳಗಿಳಿಯುವುದೆಂದು ವೇದವ್ಯಾಸರು ಹೇಳಿದರು, ಸಾಕ್ಷಾನ್ನಾರಾಯಣಾವತಾರರಾದ ಅವರ ಮಾತೇ ಮಾನ್ಯವಾದುದು. ಅಲ್ಲದೆ, ನಿತ್ಯವೂ ಮಂಡಲಾಕಾರವಾಗಿ ಸುತ್ತುವ ಸಪ್ತಋಷಿಗಳ (ನಕ್ಷತ್ರಗಳ) ಗಮನವನ್ನು ಎಲ್ಲರೂ ನೋಡಬಹುದು. ಆದುದರಿಂದ, ಜ್ಯೋತಿಶ್ಚಕ್ರವೆನಿಸುವ ಕಾಲಚಕ್ರವು ಸುವರ್ಣಮಯವಾದ ಮೇರು ಪರ್ವತಕ್ಕೆ ಸುತ್ತುವುದೇ ಹೊರತು ಪಾತಾಳಕ್ಕಿಳಿದು ಮೇಲೆ ಬರುವುದಿಲ್ಲ.

[ಇಲ್ಲಿ ನಾವು ಗಮನಿಸಬೇಕಾದ ಅಂಶಗಳು ಇವು. ಗೌತಮರ ಶಾಪದ ದೆಸೆಯಿಂದ ವೇದಾರ್ಥಜ್ಞಾನವು ಮಂಕಾಗಿ ಹೋಯಿತು. ಬ್ರಹ್ಮಾಂಡದ ವಿವರಗ ಳನ್ನು ಜನ ಮರೆಯುತ್ತಾ ಬಂದರು. ಕಲಿಯುಗದ ಬುದ್ಧಿವಂತರು ಪ್ರತ್ಯಕ್ಷವನ್ನು ಮಾತ್ರ ನಂಬುತ್ತಾ, ಅಗೋಚರ ವಿಷಯಗಳನ್ನು ಕೈಬಿಡಲಾರಂಭಿಸಿದರು. ಆದರೂ ಹಳೆಯ ನೆನಪುಗಳನ್ನು ಅರೆಬರೆಯಾಗಿ ಉಳಿಸಿಕೊಂಡಿದ್ದ ವೈದಿಕ ಪಕ್ಷದವರು ಸಪ್ತದ್ವೀಪ ಸಪ್ತಸಾಗರಗಳ ಸಹಿತವಾದ ಭೂಮಂಡಲವು ದುಂಡಾಗಿ ಒಂದು ನಾಣ್ಯ ದಂತೆ ಇರುವುದೆಂದು ನಂಬಿದ್ದರು. ಆದರೆ, ನಾವು ವಾಸಿಸುವ ಭೂಗೋಳವನ್ನು ಬಿಟ್ಟು ಕಣ್ಣಿಗೆ ಕಾಣದ ಭೂಮಂಡಲದ ಪ್ರದೇಶಗಳಲ್ಲಿ ನಂಬಿಕೆಯಿಲ್ಲದ ಆಧುನಿಕರ ವಾದವನ್ನೂ ಕೈಬಿಡಲಾರದ ವೈದಿಕರು ನಾವು ವಾಸಿಸುವ ಭೂಮಿಯೇ ಚಪ್ಪಟೆ ಯಾಗಿ, ರೂಪಾಯಿ ನಾಣ್ಯದಂತಿದೆ ಎಂದು ಹೇಳಲಾರಂಭಿಸಿದರು. ಅವರ ಗ್ರಹಿಕೆಯ

ಪ್ರಕಾರ ಪಶ್ಚಿಮದಲ್ಲಿ ಕಾಣದಾದ ಸೂರ್ಯ, ಪಶ್ಚಿಮ ಸಮುದ್ರದಲ್ಲಿ ಮುಳುಗಬೇಕು ; ಉದಯ ಕಾಲದಲ್ಲಿ ಪೂರ್ವ ಸಮುದ್ರದಲ್ಲಿ ಏಳಬೇಕು ! ಪ್ರಾಚೀನಗ್ರೀಕರೂ ಇಂತಹ ಭಾವನೆಯನ್ನು ಹೊಂದಿದ್ದವರೇ. ಭಾಗವತಾದಿ ಪುರಾಣಗಳನ್ನು ಸರಿಯಾಗಿ ಅರ್ಥಮಾಡಿಕೊಂಡರೆ, ನಮ್ಮ ಭೂಭಾಗವು ಗೋಳಾಕಾರವಾಗಿರುವುದೆಂದೇ ತಿಳದುಬರುವುದು.

ಆಧುನಿಕ ವಿಜ್ಞಾನಿಗಳ ಪ್ರಭಾವಕ್ಕೆ ಒಳಗಾಗದಿದ್ದರೂ ವೈದಿಕ ಪುರಾಣಗಳನ್ನು ಸರಿಯಾಗಿ ಅರ್ಥಮಾಡಿಕೊಂಡಿದ್ದ ಶ್ರೀ ವಾದಿರಾಜರು ಭೂಗೋಳದ ವಿಚಾರವನ್ನು ಸರಿಯಾಗಿಯೇ ತಿಳಿಸಿದ್ದಾರೆ.

ಕಾಲಚಕ್ರವು ಉತ್ತರದ ಕಡೆಗೆ ಏರುವುದೆಂದೂ, ಮತ್ತೆ ಇಳಿಯುವುದೆಂದೂ ವೇದವ್ಯಾಸರು ಹೇಳಿರುವುದು ಭೂಲೋಕದ ಅಂತರಿಕ್ಷದಲ್ಲಿ, ಮೇರುಶಿರೋಭಾಗದಿಂದ ಧ್ರುವಮಂಡಲದವರೆಗೆ ನಿರ್ಮಿತವಾಗಿರುವ ಮಹಾಕಾಲಚಕ್ರದ ವಿಷಯವಾಗಿ. ಆದರೆ ಏರಿಳಿತಗಳ ಕಾರಣದಿಂದಲೇ ಋತುಮಾನಗಳು ನಮ್ಮ ಭೂಗೋಳದಲ್ಲಿ ಕಂಡುಬರುವುವೆಂಬ ವಿಷಯವನ್ನು ಹಿಂದೆಯೇ ಹೇಳಿದೆ.]

## ಬ್ರಹ್ಮಾಂಡದ ನವಾವರಣಗಳು

ಹೈಮಾಂಡಂ ಯೋಜನಾನಾಂ ಶತಕೋಟಿಪ್ರವಿಸ್ತೃತಂ ।
ಅರ್ಬುದಂ ಯೋಜನಾನಿ ಸ್ಯುರಪಾಂ ಗಣಕ ಸಂಖ್ಯಯಾ ॥೩೪೫॥

ನಿರ್ಬುದಂ ಯೋಜನಾನಿಸ್ಯು ಸ್ತೇಜೋರೂಪಾವೃತೇರ್ಬುಧೈಃ ।
ವಾಯೋಸ್ತು ಖರ್ವ ಸಂಖ್ಯಾತು ಯೋಜನಾನಾಂ ತತಃ ಪರಂ ॥೩೪೬॥

ಯೋಜನಾನಾಂ ಮಹಾಖರ್ವಮಾಕಾಶಸ್ಯ ಪ್ರಕೀರ್ತಿತಂ ।
ಪದ್ಮಂತು ಯೋಜನಾನಾಂ ಸ್ಯಾದಹಂಕಾರಸ್ಯ ತದ್ಬುಧೈಃ ॥೩೪೭॥

ಮಹಾಪದ್ಮಂ ಯೋಜನಾನಾಂ ಮಹತ್ತತ್ವಸ್ಯ ತದ್ಬುಧೈಃ ।
ಕ್ಷೋಣೀತು ತಮಸಃ ಪ್ರೋಕ್ತಂ ಮಹಾಕ್ಷೋಣ್ಯಾ ರಜಃ ಸ್ಮೃತಂ ॥೩೪೮॥

ಶಂಖಃ ಸತ್ವಗುಣಸ್ಯ ಸ್ಯಾದ್ದಶಮಾವರಣಸ್ಯತು ।
ಅಂಡಾಂತರಾಂಡಕೋಶಸ್ತು ಪಂಚಾಶತ್ಕೋಟಿ ವಿಸ್ತೃತಃ ॥೩೪೯॥

ಸುವರ್ಣಮಯವಾದ ಬ್ರಹ್ಮಾಂಡದ ಸುತ್ತಲೂ (ಅದಕ್ಕಿಂತ ಮೊದಲೇ ಸೃಷ್ಟವಾದ) ಒಂಭತ್ತು ಆವರಣಗಳಿರುವುವು. (ಅವು ಒಂದಕ್ಕಿಂತಲೂ ಒಂದು ಹೆಚ್ಚು ಸೂಕ್ಷ್ಮ) ಬ್ರಹ್ಮಾಂಡ ಖರ್ಪರದ ದಪ್ಪ 100 ಕೋಟಿ ಯೋಜನ. ಅದನ್ನು ಸುತ್ತುವರಿದಿರುವ ಜಲತತ್ತ್ವದಾವರಣದ ವಿಸ್ತಾರ 1000 (ಅರ್ಬುದ) ಯೋಜನ; ತೇಜಸ್ತತ್ತ್ವದಾವರಣ (ನಿರ್ಬುದ), 10,000 ಯೋಜನ; ವಾಯುತತ್ತ್ವದ ಆವರಣ (ಖರ್ವ); 1,00,000 ಯೋಜನ; ಅಹಂಕಾರ ತತ್ತ್ವದ ಆವರಣ (ಪದ್ಮ), ಮಹತ್ತತ್ತ್ವದ ಆವರಣ (ಮಹಾಪದ್ಮ) 10,00,00,00 ಯೋಜನ; ತಮೋಗುಣ ಆವರಣ (ಮಹಾ ಕ್ಷೋಣಿ); 1000,00,00,0 ಯೋಜನ; ಸತ್ವಗುಣ ಆವರಣ (ಶಂಖ) 11,000,00,00,000 ಯೋಜನ. ಬ್ರಹ್ಮಾಂಡದ ಒಳಗಿನ ವಿಶ್ವದ ವಿಸ್ತಾರ 50 ಕೋಟಿ ಯೋಜನ. ಈ ವಿಶ್ವವು ಬ್ರಹ್ಮಾಂಡವೆಂಬ ಪೃಥ್ವೀ ಆವರಣ ಸಹಿತವಾಗಿ ದಶಾವರಣಯುಕ್ತವಾಗಿದೆ. ಆವರಣಗಳ ಸಹಿತವಾದ ವಿಶ್ವದ ಒಟ್ಟು ವಿಸ್ತಾರ 50 + 100 + 1000 + 10,000 + 10,00,00 + 1,00, 0000, + 1,00,00,00,0, + 100,00,00,00 + 10000,00,000, + 10,000,00,00,00 = 11 111 ಕೋಟಿ, ಲಕ್ಷ, 11 ಸಾವಿರದ 150 ಕೋಟಿ ಯೋಜನ.

[ಇಷ್ಟು ವಿಸ್ತಾರವಾದ ವಿಶ್ವವು ಪರಬ್ರಹ್ಮನ (ಬೃಹನ್ನಾರಾಯಣನ) ಒಂದು ರೋಮಕೂಪವನ್ನು ತುಂಬಲು ಸಾಲದು ಎನ್ನುತ್ತಾರೆ; ಆದುದರಿಂದಲೇ ಆ ಪರಬ್ರಹ್ಮನ ರೂಪವು ಅಮಿತವೆನ್ನುತ್ತಾರೆ. ಪ್ರತಿಯೊಂದಕ್ಕೂ ಮಿತಿ ಇದೆ. ಆದರೆ, ಅವನನ್ನು ಮಿತಿಗೆ ಒಳಪಡಿಸುವ ವಸ್ತು ಬೇರೆ ಯಾವುದೂ ಇಲ್ಲ. "ಅತ್ಯತಿಷ್ಠದ್ದಶಾಂಗುಲಂ" ಎಂದು ಪುರುಷಸೂಕ್ತವು ಹೇಳುವುದು ಇದೇ ಅರ್ಥದಲ್ಲಿ. ಇಲ್ಲಿ ಅಂಗುಲ ಎಂಬ ಪದವು ಆವರಣ ಎಂಬ ಅರ್ಥದಲ್ಲಿ ಬಳಸಲಾಗಿದೆ.]

ಯಸ್ಯಬ್ರಹ್ಮ ಚ ಕ್ಷತ್ರಂಚೋಭೇ ಭವತ ಓದನಃ ।
ಇತಿಶ್ರುತೇರಸಂಖ್ಯಾತ ಬ್ರಹ್ಮಣಾಂ ಚಕ್ರವರ್ತಿ ನಾಂ ॥೩೫೦॥
ಮನುಷ್ಯ ಪಶುಪಕ್ಷ್ಯಾದಿ ಜೀವಾನಾಂಚ ದಿವೌಕಸಾಂ ।
ಸರ್ಪಾಣಾಂ ದಾನವಾನಾಂಚ ಯಕ್ಷ ಗಂಧರ್ವ ಜನ್ಮನಾಂ ॥೩೫೧॥
ಇತಿ ಶ್ರುತೇರ್ನಾರಕಾಣಾಂ ದೇಹಾಖ್ಯಭೃತ ಸಂಸ್ಕೃತೈಃ ।
ಲವಣೇಕ್ಷು ಸುರಾಸರ್ಪಿದಧಿಕ್ಷೀರ ಶುಭೋನಕ್ಯೈಃ ॥೩೫೨॥

ನಾನಾರಸೌಘಪಾನೀಯ ಸ್ಥಾನೀಯೈರಪಿ ಸಂಕುಲೈಃ ।
ಚಿತ್ರಾ ಸಧಾಖ್ಯಶಾಕೈಶ್ಚ ವನಸ್ಪತಿಭಿರೇವಚ ॥೩೩೩॥
ನಾನಾಪಕ್ವಫಲೋಪೇತೈರ್ಮಿಶ್ರಿತಂ ವಿಶ್ವಮೀದೃಶಂ ।
ಸಂಕರ್ಷಣಾಗ್ನಿನಾ ಪಕ್ವಮಂಡಾಖ್ಯೇ ಹೈಮ ಭಾಜನೇ ।
ಸ್ವಯಂ ಪಾಕೀವ ಭಗವಾನ್ ಮಹಾಕಾಯೋಜನಾರ್ದನಃ ॥೩೩೪॥
ಭುಕ್ತ್ವಾ ಪುನರ್ಜೀರ್ಣಿಕಾಮ ಇವಸೌವರ್ಣಭಸ್ಮಚ ।
ಅಂಡದಾಹ ಸಮುದ್ಭೂತಂ ಸ್ವಾಂತಸ್ಥೇನ ಮಹಾಗ್ನಿನಾ ॥೩೩೫॥
ಪುನಃಪುನಶ್ಚಕ್ವಥಿಕಂ ಬಹಿರಾವರಣೋದಕಂ ।
ಸ್ವೀಕೃತ್ಯ ಭಾರ್ಯಯಾ ಲಕ್ಷ್ಮ್ಯಾ ಸಹ ತದ್ರೂಪ ವಾರಿಧೌ ॥೩೩೬॥
ವಟಪತ್ರಪುಟೇ ಶೇತೇ ಸಿದ್ರಾಳುರಿವ ಲೀಲಯಾ ।
ಇತ್ಥಂ ಭುವನ ಮರ್ಯಾದಾ ಕೀರ್ತಿತಾ ಪ್ರೀತಯೇ ಹರೇಃ ॥೩೩೭॥

ಸೃಷ್ಟವಾದ ಜಗತ್ತನ್ನು ಪರಮಾತ್ಮನು ಲಯಗೊಳಿಸುವ ವಿಧಾನವನ್ನು ಇಲ್ಲಿ ಹೇಳುತ್ತಾರೆ.

ಜಗತ್ತಿಗೆ ಸೃಷ್ಟಿಕರ್ತನೆನಿಸಿಕೊಂಡಿದ್ದ ಚತುರ್ಮುಖ ಬ್ರಹ್ಮನೂ ಕ್ಷಿತಿಪಾಲಕರೆನಿಸಿದ್ದ ಅಸಂಖ್ಯಾತ ಚಕ್ರವರ್ತಿಗಳೂ ಕಡೆಗೆ ಪರಬ್ರಹ್ಮನ ಭೋಜನಕ್ಕೆ ಆಹಾರವಾಗಿ ಬಿಡುತ್ತಾರೆ ಎಂದು ಶ್ರುತಿಗಳು ಹೊಗಳುತ್ತವೆ. ಅಷ್ಟೇ ಅಲ್ಲ ; ಮನುಷ್ಯವರ್ಗದವರು, ಪಶು ಪಕ್ಷಿ ಮೊದಲಾದ ಜೀವರು, ದೇವತೆಗಳು, ಮಹಾಸರ್ಪಗಳು (ಸರಿದಾಡುವ ಪ್ರಾಣಿಗಳು), ದಾನವರು, ಯಕ್ಷರು, ಗಂಧರ್ವರು, ನಾನಾ ಜಲಚರ ಪ್ರಾಣಿಗಳು, ಅಸಂಖ್ಯಾತ ಪಿಶಾಚವರ್ಗದವರು–ಎಲ್ಲರೂ ಆ ಭಗವಂತನಿಗೆ ಆಹಾರಪ್ರಾಯವಾಗಿ ಬಿಡುತ್ತಾರೆ. ದೇಹಗಳ ಮಾಂಸಗಳಲ್ಲಿನ ಕೊಬ್ಬಿನ ಪದಾರ್ಥವೇ ಆಹಾರ ಶುದ್ಧಿಯುಂಟುಮಾಡುವ ತಪ್ಪ. ಸಪ್ತ ಸಾಗರಗಳ ವಿವಿಧ ರಸಯುಕ್ತ ಜಲಸಮೂಹವೇ ಪಾನೀಯ. ನಾನಾ ಬಗೆಯ ಸಸ್ಯಗಳು, ವೃಕ್ಷಗಳು ಕಾಯಿಪಲ್ಯಗಳು. ಭೋಜನಾನಂತರ ಭಕ್ಷಿಸುವುದಕ್ಕೆ ವೃಕ್ಷಗಳ ವಿವಿಧ ಫಲಗಳು. ಈ ಎಲ್ಲವೂ ಸಂಕರ್ಷಣಾಗ್ನಿಯಲ್ಲಿ ಪಕ್ವಗೊಳ್ಳುತ್ತವೆ. ಅಡುಗೆ ಮಾಡಲು ಬೇರೆ ಪಾತ್ರೆಯ ಅಗತ್ಯವಿಲ್ಲ. ಬಂಗಾರದ ಬ್ರಹ್ಮಾಂಡವೇ ಆ ಪಾತ್ರೆ ಸಂಕರ್ಷಣಾಗ್ನಿಯಿಂದ ಬ್ರಹ್ಮಾಂಡ ದಹಿಸಿ ಹೋಗುವಾಗ ಉಂಟಾದ ಶಾಖದಿಂದ ಬಹಿರಾವ

ರಣದ ಉದಕವು ಕುದಿಯಲಾರಂಭಿಸುತ್ತದೆ. ಅದರಲ್ಲಿ ಬೂದಿಯಾದ ಬ್ರಹ್ಮಾಂಡ ವನ್ನು (ಸುವರ್ಣಭಸ್ಮವನ್ನು) ಕದಡಿ ಆ ಮಹಾನುಭಾವ ಕುಡಿದು ಬಿಡುತ್ತಾನೆ. ಸೃಷ್ಟವಾದ ವಸ್ತುಗಳೆಲ್ಲಾ ಹೀಗೆ ಲಯಹೊಂದಿದ ಮೇಲೆ, ಲಕ್ಷ್ಮ್ಯಾತ್ಮಕವಾದ ಉದಕದ ಮೇಲೆ ಆಲದೆಲೆಯೆಂಬ ತೊಟ್ಟಿಲಲ್ಲಿ ಪುಟ್ಟ ಮಗುವಿನಂತೆ ಅವನು ನಿದ್ರಾಸಕ್ತನಂತೆ ಕಣ್ಮುಚ್ಚಿ ಮಲಗುತ್ತಾನೆ.

ಈ ರೀತಿಯಾಗಿ, ಶ್ರೀಹರಿಯ ಪ್ರೀತ್ಯರ್ಥವಾಗಿ, ಈ ಭೂಗೋಳ ವಿಸ್ತಾರ ವೆಂಬ ಗ್ರಂಥವು ರಚಿತವಾಯಿತು [ಶ್ರೀ ಹರಿಯು ಭೋಜನ ಮಾಡುವುದೆಂದರೆ, ತನ್ನ ಉದರದಿಂದ ಹೊರತೆಗೆದು ಸೃಷ್ಟಿಯಲ್ಲಿ ತಂದಿದ್ದ ವಸ್ತುಗಳನ್ನೆಲ್ಲಾ ಮತ್ತೆ ತನ್ನ ಉದರದೊಳಕ್ಕೆ ಸೇರಿಸಿಕೊಳ್ಳುವ ಕ್ರಮ. ಹೀಗೆ ಮಾಡುವುದು ತನಗಾಗಿ ಅಲ್ಲ; ಸೃಷ್ಟಿಯಲ್ಲಿ ತಂದ ಜೀವರಿಗೆ ಸಾಧನೆಗಳನ್ನು ಮಾಡಿಸಿ, ಅವರ ಸ್ವರೂಪ ಗಳನ್ನು ವ್ಯಕ್ತಪಡಿಸುವುದಕ್ಕಾಗಿ; ಅವರವರಿಗೆ ಇಷ್ಟವಾದ ಗತಿಗಳನ್ನು ನೀಡು ವುದಕ್ಕಾಗಿ;

ಪ್ರಳಯ ಕಾರ್ಯದ ರೀತಿಯು ಇಲ್ಲಿ ವರ್ಣಿತವಾಗಿದೆ. ಬ್ರಹ್ಮಾಂಡದೊಳಗಿನ ವಸ್ತುಗಳನ್ನೆಲ್ಲಾ ಭೂಭಾರವನ್ನು ಹೊತ್ತಿದ್ದ ಆದಿಶೇಷನಂತರ್ಯಾಮಿಯಾದ ಸಂಕರ್ಷಣರೂಪೀ ಭಗವಂತನು ಸೃಷ್ಟಿಸುವ ಪ್ರಳಯಾಗ್ನಿಯು ದಹಿಸಿಬಿಡುತ್ತದೆ. ಬ್ರಹ್ಮಾಂಡದೊಳಗಿದ್ದ ವಸ್ತುಗಳು ಸೂಕ್ಷ್ಮರೂಪವನ್ನು ಹೊಂದಿ ಹೊರಗಿನ ಆವರಣ ಗಳಲ್ಲಿ ಕ್ರಮವಾಗಿ ಸೇರಿಕೊಳ್ಳುತ್ತವೆ. ಈ ಎಲ್ಲವನ್ನೂ ಬಾಲರೂಪದಿಂದ ಮಲಗಿದ ಶ್ರೀ ಹರಿಯು ತನ್ನ ಉದರದಲ್ಲಿ ಸೇರಿಸಿಕೊಂಡು ಬಿಡುತ್ತಾನೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಲಯ ಕಾರ್ಯವೆಂಬುದು ಜೀವರ ಸಾಧನೆಗಳ ಸಂಗ್ರಹ; ಅದರಿಂದ ಅವರಿಗೆ ವೈಕುಂಠ ಮೊದಲಾದ ಸ್ಥಾನಗಳಲ್ಲಿ ಫಲಪ್ರದಾನ. ಶಿಶುರೂಪೀ ಭಗವಂತನು ತನ್ನ ಕಾಲಹೆಬ್ಬೆರಳನ್ನು ಬಾಯಲ್ಲಿಟ್ಟುಕೊಂಡು ಚೀಪುವುದೆಂದರೆ, ಜೀವರ ಸಾಧನ ಫಲಗಳ ಶುಚಿಯನ್ನು ಸವಿಯುವುದಂತೆ! ಹಾಗೆಂದು ಹರಿದಾಸರು ವರ್ಣಿಸಿದ್ದಾರೆ.

"ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯಂತಂ ।
ವಟಸ್ಯಪತ್ರಸ್ಯ ಪುಟೇಶಯಾನಂ ಬಾಲಂ ಮುಕುಂದಂ ಮನಸಾಸ್ಮರಾಮಿ ॥"

# ಸಮರ್ಪಣೆ

ಮಧ್ವಸ್ಯವಾಣ್ಯಾ ದೇವಾನಾಂ ಗುರೂಣಾಂಚ ಸದಾ ಮುದೇ ।
ಪೂರ್ಣಬೋಧಾರ್ಯ ಭಕ್ತೇನ ವಾದಿರಾಜಾಖ್ಯ ಭಿಕ್ಷುಣಾ ॥೩೫೯॥
ವಾಕ್ಯಾರ್ಥಕಥನ ವ್ಯಾಜ್ಯಾದ್ಭೂಗೋಳ ಮಿತಿ ವಿರ್ಣಿತಂ ॥೩೬೦॥
ನಮೋಸ್ತು ಲಕ್ಷ್ಮೀಪತಯೇ ಗತಯೇಖಿಲ ಯೋಗಿನಾಂ ।
ನಮೋಸ್ತು ಪೂರ್ಣಪ್ರಜ್ಞಾಯ ಶಾಸ್ತ್ರಾಭಿಜ್ಞಾಯ ಸರ್ವದಾ ॥೩೬೧॥

॥ ಇತಿ ಶ್ರೀವಾದಿರಾಜ ಪೂಜ್ಯಚರಣವಿರಚಿತಂ ಭೂಗೋಳ ವರ್ಣನಂ ಸಮಾಪ್ತಂ ॥

ಮುಂದಿನ ಬ್ರಹ್ಮಕಲ್ಪದಲ್ಲಿ ತಾವೇ ಮಧ್ವಾಚಾರ್ಯರಾಗಿ ಶ್ರೀ ಹರಿಯ ಪರಮ ಸೇವಕರಾಗುವವರಾದರೂ, ಶ್ರೀ ವಾದಿರಾಜರು ತಾರತಮ್ಯಜ್ಞಾನದ ಪ್ರಯೋಜನವನ್ನು ಸಕಲ ಸಜ್ಜನರಿಗೂ ತಿಳಿಸಿಕೊಡುವಂತೆ, ತಾವು ಈ ಗ್ರಂಥವನ್ನು ರಚಿಸಿದವರಲ್ಲ, ತಮ್ಮ ಹೃದಯ ಪೀಠದಲ್ಲಿ ನಿಂತು ಶ್ರೀ ಮಧ್ವಾಚಾರ್ಯರೇ ಗ್ರಂಥವನ್ನು ರಚಿಸಿದವರು ಎಂದು ಹೇಳಿ, ಸ್ವಾಹಂಕಾರ ಖಂಡನೆಯ ವಿಧಾನವನ್ನು ತೋರಿಸಿದ್ದಾರೆ. ನಾವು ಪುರುಷೋತ್ತಮನಾದ ಪರಮಾತ್ಮನಿಗೇ ನಮಸ್ಕಾರವನ್ನು ಮಾಡುದಾದರೂ, ಲೋಕಗುರುಗಳಾದ ಶ್ರೀ ಮಧ್ವರ ಹೃನ್ಮಂದಿರವಾಸಿಗೆಂದು ಅರ್ಪಿಸಿವುದಾಗಲೇ ಅದು ಸಾರ್ಥಕವಾಗುವುದು. ಆದುದರಿಂದ ಶ್ರೀಲಕ್ಷ್ಮೀನಾರಾಯಣರಿಗೆ ನಮಸ್ಕರಿಸಿ ಗ್ರಂಥ ಸಮರ್ಪಣೆ ಮಾಡುವ ಸಂದರ್ಭದಲ್ಲಿ ಅದು ಶಾಸ್ತ್ರಗಳ ಮರ್ಮಗಳನ್ನು ಬಲ್ಲ ಶ್ರೀ ಪೂರ್ಣಪ್ರಜ್ಞಾಚಾರ್ಯರ ಅಂತರ್ಯಾಮಿಗೆ ಸಮರ್ಪಿತವೆಂದು ಕೈಮುಗಿದಿದ್ದಾರೆ.

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಓಂ ॥ ಶ್ರೀಃ ॥ ಓಂ ॥

# ಪರಿಶಿಷ್ಟ

# ವಿಜ್ಞಾನಿಗಳ ಇತಿಮಿತಿಗಳು

ಕಣ್ಣಿಗೆ ಅಥವ ಆಧುನಿಕ ವೈಜ್ಞಾನಿಕ ಉಪಕರಣಗಳಿಗೆ ಗೋಚರಿಸದ ಯಾವುದನ್ನೂ ನಂಬದೆ, ಹೊಸದೊಂದು ವಿಷಯವು ಕಣ್ಣಿಗೆ ಬಿದ್ದಾಗ ಉಂಟೆಂದು ಹೇಳುವ ವಿಜ್ಞಾನಿಗಳು ಪ್ರಾಮಾಣಿಕರೇ ಆದರೂ, ನಿಜ ಹೇಳುವುದಾದರೆ, ಅವರು ಬುದ್ಧಿವಂತರಲ್ಲ. ಸುವಿಚಾರದಿಂದ ತಿಳಿಯಬಹುದಾದ ಮಾನವ ಚೈತನ್ಯದ ಕಡೆಗೆ ಅವರು ಗಮನಕೊಡದೆ, ಮನೋವಿಜ್ಞಾನದ ಹೆಸರಿನಲ್ಲಿ ಅಲ್ಪ ಸ್ವಲ್ಪ ಪ್ರಯತ್ನ ನಡೆಸಿ, ಇನ್ನೂ ಸಫಲರಾಗದೇ ಇರುವುದು ವಿಜ್ಞಾನಿಗಳ ಇತಿಮಿತಿಗೆ ಸ್ಪಷ್ಟವಾದ ಉದಾಹರಣೆಯಾಗಿದೆ. ನರಮಂಡಲವೂ, ಅದರ ಮುಖ್ಯಸ್ಥಾನವಾದ ಮೆದಳೂ ಜ್ಞಾನವಾಹಕ ಯಂತ್ರಗಳೇ ಹೊರತು ಅವು ಜ್ಞಾನಗ್ರಾಹಕಗಳಲ್ಲ. ಪಂಚ ಜ್ಞಾನೇಂದ್ರಿಯಗಳಿಂದ ತಿಳಿದು ಬರುವ ಜ್ಞಾನವು ನರಗಳ ಮುಖಾಂತರ ಮನಸ್ಸನ್ನು ಮುಟ್ಟುವುದು. ಜ್ಞಾನದ ಉಗ್ರಾಣ ಮೆದುಳು ; ಆದರೆ ಜ್ಞಾನ ಕಾರ್ಯವನ್ನು ಮುಖ್ಯವಾಗಿ ನಡೆಸುವುದು ಮನಸ್ಸು. ಅದು ಬೆನ್ನು ಹುರಿಯ (Spinal-Chord) ಕೇಂದ್ರವೊಂದರಲ್ಲಿದೆ. ಬೆಂಕಿ ಅಥವ ಮುಳ್ಳು ತುಳಿದಾಗ, ಅದನ್ನು ಗ್ರಹಿಸಿ, ಕಾಲನ್ನು ಕೂಡಲೇ ಹಿಂದಕ್ಕೆಳೆದುಕೊಳ್ಳುವಂತೆ ಆಜ್ಞೆ ನೀಡುವುದು ಮನಸ್ಸು ; ಅನಂತರ ನಡೆದ ಸಂಗತಿ ಮೆದುಳಿನಲ್ಲಿ ಅಚ್ಚೊತ್ತುವುದು. ಇದನ್ನು ಪರಾವರ್ತಿತ ಪ್ರತಿಕ್ರಿಯೆ (reflex action) ಎಂದು ವಿಜ್ಞಾನಿಗಳು ಹೇಳುವರು.

ಇದರಿಂದ ತಿಳಿದು ಬರುವ ಮುಖ್ಯ ಸಂಗತಿ ಎಂದರೆ, ನರಮಂಡಲದಲ್ಲೆಲ್ಲಾ ಅತಿ ಮುಖ್ಯವಾದುದು ಬೆನ್ನುಹುರಿ. ಅದರ ಮುಖ್ಯ ಕೇಂದ್ರವು ನಮ್ಮ ಎದೆಯಗೂಡಿನ ನೇರದಲ್ಲಿರುವುದು ; ಆ ಕೇಂದ್ರವೇ ಮನಸ್ಸು. ಅದು ಕೂಡ ಪ್ರಾಕೃತ ವಸ್ತುವೇ

ಆದುದರಿಂದ, ಮನಸ್ಸು ಸಂಗ್ರಹಿಸಿದ ಜ್ಞಾನದ ಪ್ರಯೋಜನವನ್ನು ಪಡೆಯುವುದು ಮನಸ್ಸಿನ ಮೇಲೆ ಯಾಜಮಾನ್ಯವನ್ನು ಹೊಂದಿರುವ ಚೈತನ್ಯ ಸ್ವರೂಪ. ಅದನ್ನು ಶಾಸ್ತ್ರಗಳು 'ಜೀವ' ಎಂದು ವ್ಯವಹರಿಸುತ್ತವೆ. ಮನಸ್ಸು ಜೀವನಿಗಾಗಿ ಪಂಚೇಂದ್ರಿಯಗಳ ಮುಖಾಂತರ ಜ್ಞಾನವನ್ನು ಸಂಗ್ರಹಿಸುವುದಲ್ಲದೆ, ಜೀವನ ಪರವಾಗಿ ಕರ್ಮೇಂದ್ರಿಯಗಳಿಗೆ ಆಜ್ಞೆಯನ್ನೂ ಕೊಡುವುದು. ಅಷ್ಟೇ ಅಲ್ಲದೆ, ಅದು ಜೀವರ ಸ್ವಾಭಾವಿಕ ಭಾವಗಳನ್ನು ವ್ಯಕ್ತಗೊಳಿಸುವುದು. ಸುಖ, ದುಃಖ, ಸ್ನೇಹ, ದ್ವೇಷ ಮುಂತಾದ ಜೀವ ಸ್ವಭಾವಗಳು ಮನಸ್ಸಿನ ಮುಖಾಂತರ ಹೊರ ಹೊಮ್ಮುವುವು; ಸ್ವೀಕರಿಸಲ್ಪಡುವುವು.

ಇಂತಹ ಮನಸ್ಸಿನ ವಿಚಾರವನ್ನಾಗಲೀ, ಮನಸ್ಸಿಗೆ ಸ್ವಾಮಿಯಾದ ಜೀವ ಚೈತನ್ಯದ ವಿಚಾರವನ್ನಾಗಲೀ ತಿಳಿಯದಿರುವುದು ವಿಜ್ಞಾನಿಗಳ ಇತಿಮಿತಿಯನ್ನು ಸಾರಿ ಹೇಳುತ್ತದೆ. ಆಧುನಿಕ ವಿಜ್ಞಾನಿಗಳು ತಮ್ಮ ಹಟವನ್ನು ಬಿಟ್ಟು ಭಾರತೀಯ ತತ್ವಶಾಸ್ತ್ರಗಳ ಕಡೆಗೆ ಗಮನ ಹರಿಸಿದರೆ ನಿಜವಾದ ವಿಜ್ಞಾನ ಅವರ ಪಾಲಿನ ಸ್ವತ್ತಾಗುವುದು.

ನಮ್ಮ ಶಾಸ್ತ್ರಗಳ ಪ್ರಕಾರ ಮನಸ್ಸಿನ ವಿಚಾರ ಹೀಗಿದೆ–ಬೆನ್ನು ಹುರಿಯ ಅಂತರಾಳದಲ್ಲಿ, ನಾಭಿಯ ಕೆಳಗಿನ ಮೂಲದಿಂದ ಶಿರಸ್ಸಿನ ಸಹಸ್ರಾರದ (Cerebrum) ವರೆಗೆ, ಅತೀಂದ್ರಿಯವಾದ ಸುಷುಮ್ನಾ ನಾಡಿ (ನರ) ಇದೆ. ಅದರಲ್ಲಿ, ಎದೆಯ ಗೂಡಿನ ನೇರದಲ್ಲಿ, ಅಷ್ಟದಳ ಕಮಲವಿದೆ. (Superfine nervous knot) ಅದರಲ್ಲಿ ಸ್ಥಿತನಾದ ಪರಮಾತ್ಮನ ವಶದಲ್ಲಿ ಜೀವನಿದ್ದಾನೆ. ಅವನಿಗೆ ಆವರಕವಾದ ಅಜ್ಞಾನ ಕೋಶದಲ್ಲಿ ಅನಾದಿ ಮನಸ್ಸು ಇದೆ. ಅಷ್ಟದಳ ಕಮಲದಲ್ಲಿ ಅದರ ಕಾರ್ಯ ಅಭಿವ್ಯಕ್ತವಾಗುತ್ತದೆ. ಇಂತಹ ಮನಸ್ಸಿನಲ್ಲಿ–ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ ಎಂಬ ಐದು ವಿಭಾಗಗಳಿವೆ; ಒಂದಕ್ಕಿಂತ ಒಂದು ಹೆಚ್ಚು ಸೂಕ್ಷ್ಮ. ಬಾಹ್ಯ ಜ್ಞಾನವನ್ನು ಗ್ರಹಿಸುವುದು, ಮತ್ತು ಪ್ರತಿಕ್ರಿಯೆಗಳನ್ನು ಪ್ರಕಟಿಸುವುದು (impulses and reactions) ಮನಸ್ಸಿನ ಕೆಲಸ. ಇದನ್ನು 'ವೃತ್ತಿಜ್ಞಾನ' ಎನ್ನುತ್ತಾರೆ. ಬಾಹ್ಯಜ್ಞಾನದಿಂದ ವಸ್ತು ಜ್ಞಾನವನ್ನು ಕುದುರಿಸುವುದು ಬುದ್ಧಿ. 'ನಾನು' ತಿಳಿದೆ ಎಂದು ಜೀವನಾದವನು ಜ್ಞಾನವನ್ನು ತನ್ನದಾಗಿಸಿಕೊಳ್ಳುವಂತೆ ಮಾಡುವುದು ಅಹಂಕಾರ ತತ್ತ್ವ. ಬಾಹ್ಯ ಜ್ಞಾನವನ್ನು

ವಿಚಾರಕ್ಕೆ ಹಚ್ಚಿ ಸ್ಪಷ್ಟಪಡಿಸುವುದು ಚಿತ್ತ. ಜ್ಞಾನವನ್ನು ಸಂಸ್ಕಾರ ರೂಪವಾಗಿ ಸಂಗ್ರಹಿಸಿಟ್ಟುಕೊಂಡು ಬೇಕಾದಾಗ ಸ್ಮರಣೆಗೆ ತಂದುಕೊಡುವುದು ಚೇತನ.

ಜೀವ ಚೈತನ್ಯದ ಹೊರತು ಈಗ ಹೇಳಿದುವೆಲ್ಲಾ ಜಡವಸ್ತುಗಳೇ ಆದುದರಿಂದ ಅವು ಜ್ಞಾನವಾಹಕಗಳು; ಜ್ಞಾನದ ಉಪಯೋಗ ಪಡೆಯುವವಲ್ಲ. ಜ್ಞಾನದ ಉಪಯೋಗ ಜೀವನಿಗೆ. ಆದರೆ, ಅಜೀವ ಸ್ವತಂತ್ರನಲ್ಲ. ಪರಮಾತ್ಮನ ಬಲದಿಂದ ಜೀವನ ವ್ಯಾಪಾರಗಳು ಅಷ್ಟಿಷ್ಟು ನಡೆಯುವುವಾದರೂ, ವಿಶ್ವದ ಸಮಸ್ತ ವ್ಯಾಪಾರಗಳೂ ನಡೆಯುವುದು ಸ್ವತಂತ್ರನಾದ ಭಗವಂತನಿಂದ. ಆ ಮಹಾನುಭಾವ, ತನ್ನ ಅಧೀನರಾದ ದೇವತೆಗಳಿಗೂ ವಿಶ್ವವ್ಯಾಪಾರಗಳಲ್ಲಿ ಅವರವರಿಗೆ ತಕ್ಕ ಕಾರ್ಯಗಳನ್ನು ವಹಿಸಿಕೊಟ್ಟು ಅವರನ್ನು ಧನ್ಯಾತ್ಮರನ್ನಾಗಿ ಮಾಡುತ್ತಾನೆ. ಜಡಗುಣಗಳು ಪ್ರಕಟವಾಗಿ ಕಾರ್ಯನಿರ್ವಾಹ ಮಾಡುವಂತಾಗುವುದು ದೇವತೆಗಳ ಸನ್ನಿಧಾನದಿಂದ. ಸೂರ್ಯಚಂದ್ರರ ಬಲದಿಂದ ಕಣ್ಣುಗಳು ನೋಡಬಲ್ಲವು. ಅಶ್ವಿನೀ ದೇವತೆಗಳ ಬಲದಿಂದ ಮೂಗು ವಾಸನೆಯನ್ನು ಗ್ರಹಿಸಬಲ್ಲುದು. ದಿಗ್ದೇವತೆಗಳ ದೆಸೆಯಿಂದ ಕಿವಿಗಳು ಶಬ್ದಗಳನ್ನು ಹಿಡಿಯುವುವು. ವರುಣದೇವನ ಕೃಪೆಯಿಂದ ನಾಲಗೆಯು ರುಚಿಯನ್ನು ಕಂಡುಕೊಳ್ಳುವುದು. ವಾಯುದೇವನ ಜ್ಞಾನದಿಂದ ಚರ್ಮವು ಸ್ಪರ್ಶ ಜ್ಞಾನವನ್ನು ಹೊಂದುವುದು.

ಇದರಂತೆ ಇಂದ್ರಕಾಮರು ಹೊರಮನಸ್ಸಿಗೆ ಯಜಮಾನರಾಗಿರುವವರು. ಬುದ್ಧಿಗೆ ಪಾರ್ವತೀ ದೇವಿಯು ಯಜಮಾನಿ. ಅಹಂಕಾರತತ್ತ್ವವು ಶಿವನ ವಶದಲ್ಲಿರುವುದು. ಗರುಡ ದೇವನ ಆಧಿಪತ್ಯದಲ್ಲಿ ಚಿತ್ತವು ಇದೆ. ಸ್ಮರಣ ಶಕ್ತಿಯು (ಚೈತನ್ಯವು) ಶೇಷ ದೇವನಿಂದ ಅಭಿಮನ್ಯಮಾನವಾಗಿದೆ. ಇವರ ಮುಖಾಂತರ ಜೀವನಿಗೆ ಮನಸ್ಸಿನ ಪ್ರಯೋಜನ ಲಭಿಸುವುದು. ಮನಸ್ಸಿನ ವ್ಯಾಪಾರಗಳನ್ನು ಪ್ರಕಟಿಸುವ ಅಷ್ಟದಳ ಕಮಲವು ಮೊಗ್ಗಿನಂತೆ ತಲೆಕೆಳಗಾಗಿರುವುದು. ಅದನ್ನು ಹೃತ್ಕಮಲ ಎನ್ನುವರು. ಅದಕ್ಕೂ, ರಕ್ತಚಲನೆಗೆ ಸಂಬಂಧಿಸಿದ ಮಾಂಸ ಹೃದಯಕ್ಕೂ ನೇರ ಸಂಬಂಧವಿದೆ.

ದೇಹದ ಯಾವ ಭಾಗವನ್ನು ಕತ್ತರಿಸಿದರೂ ಅಥವಾ ವ್ಯತ್ಯಸ್ತಗೊಳಿಸಿದರೂ (transplanting of heart, etc.) ಆ ದೇಹ ಜೀವಂತವಾಗಿರಬಲ್ಲುದು. ಜೀವನಾದವನು ದೇಹದಿಂದ ಹೊರಬಿದ್ದರೆ, ಅದು ಹೆಣವಾಗುವುದು. ದೇಹವಿರು

ವುದು ಜೀವನಿಗಾಗಿ. ಅದನ್ನು ವಿಶ್ವದ ಪರಿಸರದಲ್ಲಿಟ್ಟು ಜೀವನಿಗೆ ಉಪಕಾರವಾಗು ವಂತೆ ಮಾಡುವವನು ಪರಮ ಕರುಣಾಶಾಲಿಯಾದ ಶ್ರೀಮನ್ನಾರಾಯಣ.

ಇಂತಹ ಮಹಾವಿಜ್ಞಾನದ ಕಡೆಗೆ ಲಕ್ಷ್ಯಕೊಡದೆ, ಕೇವಲ ಜಡಪ್ರಕೃತಿಯ ವ್ಯಾಪಾರಗಳನ್ನೇ ವಿಜ್ಞಾನವೆಂದು ತಿಳಿದಿರುವವರು ನಿಜವಾಗಿ ವಿಜ್ಞಾನಿಗಳಲ್ಲ. ಅವರು ಅಜ್ಞಾನಿಗಳು. ತಮ್ಮ ಅರೆಬರೆ ಜ್ಞಾನದಿಂದ, ಜೀವ ಪ್ರಪಂಚದ ಯೋಗ ಕ್ಷೇಮವನ್ನರಿಯದ ಅವರು ಲೋಕಕ್ಕೆ ಅಹಿತಕಾರಿಗಳೇ ಹೊರತು ಉಪಕಾರಿಗಳಲ್ಲ.

ಇಂತಹ ಈಗಿನ ವಿಜ್ಞಾನಿಗಳು ತಮ್ಮ ಇತಿಮಿತಿಗಳ ವಿಚಾರವಾಗಿ ತಾವೇ ಹೇಳಿರುವ ಮಾತುಗಳನ್ನು ಈ ಮುಂದೆ ಕೊಡಲಾಗುವುದು.

## Lincoln & Barnet-'' The Universe and Einstein ''
( ಲಿಂಕನ್ ಬಾರ್ನೆಟ್–" ವಿಶ್ವ ಮತ್ತು ಐನ್‌ಸ್ಟೀನ್ " )

'' If physical events are indeterminate and the future is unpredictable then, perhaps, the unknown quantity called MIND may yet guide mans destiny among the infinite uncertainties of a Capricious universe ''

" ಪ್ರಾಕೃತಿಕ ಘಟನೆಗಳು ಅನಿರ್ದಿಷ್ಟವಾದುವು ಮತ್ತು ಭವಿಷ್ಯದ ವಿಚಾರ ಊಹಿಸಲಾಗುವುದಲ್ಲ ಎನ್ನುವುದಾದರೆ, ಬಹುಶಃ ಇನ್ನೂ ಜ್ಞಾನಸಾಧ್ಯವಾಗದಿರುವ ಮನಸ್ಸು ಎಂಬ ಅಜ್ಞಾತ ವಸ್ತುವು ಮಾನವನಿಗೆ ಮಾರ್ಗದರ್ಶಕವಾಗಬಹುದು ; ವಿಚಿತ್ರ ವಿಶ್ವದ ಕೊನೆಮೊದಲಿಲ್ಲದ ಅನಿಶ್ಚಿತ-ತತ್ವಗಳ ತೊಡಕನ್ನು ಬಿಡಿಸಲು ಸಹಕಾರಿಯಾಗಬಹುದು ".

## Dr M. Kaku and J. Trainer-'' Beyond Einstien ''
(ಡಾ. ಎಮ್. ಕಾಕು ಮತ್ತು ಜೆ. ಟ್ರೇನರ್–" ಐನ್‌ಸ್ಟೀನನಿಂದಾಚೆ ")

'' Quantum mechanics, which seems so decisive, definitive and clear-cut in its practical applications, is actually based on uncertainties, probabilities and philosophically bizarre ideas ''

" ವಸ್ತು ಮೂಲಾಧಾರಿತ ತಂತ್ರವು ಬಳಕೆಯ ದೃಷ್ಟಿಯಿಂದ ನಿರ್ದಿಷ್ಟವಾಗಿಯೂ, ನಿರೂಪಣಾರ್ಹವಾಗಿಯೂ, ಅತಿ ಸ್ಪಷ್ಟವಾಗಿಯೂ ಇದ್ದರೂ ಕೂಡ,

ನಿಜವಾಗಿ ಅದು ಅನಿಶ್ಚಿತ ವಿಷಯಗಳನ್ನು ಅವಲಂಬಿಸಿದೆ ; ಬಹುದುಗಿಹುದುಗಳ ಸೀಮೆಯಾಗಿದೆ ; ತಾತ್ವಿಕ ದೃಷ್ಟಿಯಿಂದ ಭ್ರಾಮಕ ಭಾವನೆಗಳ ಮೇಲೆ ನಿಂತಿದೆ."

ವಿಜ್ಞಾನಿಗಳು ಬಹು ಬುದ್ಧಿವಂತರು. ಆದರೆ, ಅವರು ಅತಿಶ್ರಮವಹಿಸಿ ಕಂಡು ಹಿಡಿಯುವ ವಿಷಯಗಳನ್ನು ಶಾಸ್ತ್ರಗಳು ಹೆಚ್ಚು ಸಮರ್ಪಕವಾಗಿ ತಿಳಿಸುತ್ತವೆ ಎಂಬುದನ್ನು ಅವರು ಅರಿಯದಿರುವುದು ವಿಷಾದಕರ, ಅದಕ್ಕೊಂದು ಉದಾಹರಣೆ ಇಲ್ಲಿದೆ.

## EVOLUTION (ವಿಶ್ವ ವಿಕಾಸ)
## 'The Universe and the planet earth'
## (ವಿಶ್ವ ಮತ್ತು ಭೂಗ್ರಹ)
## Josip Kleczek and Peter Jakes
## (ಜೋಸಿಪ್ ಕ್ಲೀಜೆಕ್ ಮತ್ತು ಪೀಟರ್ ಜೇಕ್ಸ್)

"In the course of 1000,00 million years, the shapeless chaotic matter evolved into super galaxies, in which galaxies formed, and proto-stars turned into stars and planets, Evolution on the earth continued to the stage of intelligent creatures with an advanced culture. It took about 10000 million years for the elementary particles of the big-bang to develop into their most advanced system-the human brain".

"ನೂರು ಕೋಟಿ ವರ್ಷಗಳಷ್ಟು ಕಾಲದಲ್ಲಿ ಆಕಾರವನ್ನು ಹೊಂದಿರದ ಅಸ್ತವ್ಯಸ್ತ ವಸ್ತುರಾಶಿಯು ಮಹಾನಕ್ಷತ್ರ ಸಮುದ್ರವಾಗಿ ರೂಪುಗೊಂಡಿತು ; ಅದರಿಂದ ನಕ್ಷತ್ರ ಪುಂಜಗಳುಂಟಾದುವು ; ಅವುಗಳಲ್ಲಿ ನಕ್ಷತ್ರಸದೃಶ ಕಾಯಗಳೂ, ಅವುಗಳಿಂದ ನಕ್ಷತ್ರಗಳು ಮತ್ತು ಗ್ರಹಗಳು ಉಂಟಾದುವು. ಭೂಗ್ರಹದ ಮೇಲೆ ವಿಕಾಸ ಕಾರ್ಯವು ಮುಂದುವರಿದು ನಾಗರೀಕತೆಯ ಉನ್ನತಮಟ್ಟವನ್ನು ಮುಟ್ಟಿದ ಬುದ್ಧಿಜೀವಿಗಳಾದ ಮಾನವರ ವರೆಗೆ ಅದು ಸಾಗಿತು. ಮೂಲ ಪ್ರಾಕೃತ ಕಣಗಳು ಮಹಾ ಸ್ಫೋಟದಿಂದ ಸಿಡಿದು, ಮಾನವ ಮೆದುಳಿನಂತಹ ಉನ್ನತ ವಸ್ತು ಸೃಷ್ಟಿಯಾಗುವುದಕ್ಕೆ 100 ಕೋಟಿ ವರ್ಷಗಳು ಬೇಕಾಯಿತು."

ವಿಜ್ಞಾನಿಗಳು ಹೀಗೆ ಹೇಳಿರುವುದು ಊಹೆಗಳ ಸರಮಾಲೆ. ಮೂಲವಸ್ತು ಎಲ್ಲಿಂದ, ಹೇಗೆ, ಏಕೆ ಬಂದಿತು ಎಂಬುದನ್ನರಿಯದೆ ಆಡುವ ಮಾತುಗಳು ಅರ್ಥ ಹೀನವಾದುವು. 'ಮಹಾ ಸ್ಫೋಟ' ಎನ್ನುವ ವಾದವನ್ನು ಎಲ್ಲಾ ವಿಜ್ಞಾನಿಗಳೂ ಒಪ್ಪಿಕೊಂಡಿರುವುದಿಲ್ಲ. ಅಲ್ಲದೆ, ಕೇವಲ ಜಡವಸ್ತುಗಳ ಆಕಸ್ಮಿಕ ತಾಕಲಾಟಗಳಿಂದ ಮಾನವರ ಮೆದುಳಿನಂತಹ ದಿವ್ಯ ಯಂತ್ರವು ವಿಕಾಸಗೊಂಡಿತೆಂದು ನಿರ್ಧಾರವಾಗಿ ಹೇಳುವುದು ಅತಿ ಉದ್ಧಟತನದ ಮಾತು.

ಭಾರತೀಯ ಶಾಸ್ತ್ರಗಳಲ್ಲಿ ವರ್ಣಿಸಿರುವ ಸೃಷ್ಟಿ ಸ್ಥಿತಿ ಲಯಗಳ ವರ್ಣನೆಯನ್ನು ಅರ್ಥಮಾಡಿಕೊಂಡಾಗ ನಿಜಸ್ಥಿತಿಯ ಅರಿವಾಗುವುದು.

"As far as we know today, the proton, the neutron and the electron are so simple that they cannot be easily divided into any thing simpler".

"ಈಗ ನಮಗೆ ತಿಳಿದ ಮಟ್ಟಿಗೆ, ಪ್ರೋಟಾನ್, ನ್ಯೂಟ್ರಾನ್ ಮತ್ತು ಎಲೆಕ್ಟ್ರಾನ್ ಎಂಬುವು ಅತ್ಯಂತ ಸೂಕ್ಷ್ಮತಮವಾದ ವಸ್ತುಗಳು; ಅವುಗಳನ್ನು ಇನ್ನೂ ಸೂಕ್ಷ್ಮವಸ್ತುಗಳಾಗಿ ವಿಭಜಿಸುವುದು ಸಾಧ್ಯವಲ್ಲ.

[ಪ್ರೋಟಾನ್ ಎಂಬುದು ಸತ್ವಗುಣವುಳ್ಳ ವಸ್ತು; ನ್ಯೂಟ್ರಾನ್ ಎಂಬುದು ಜಡವಸ್ತು; ಎಲೆಕ್ಟ್ರಾನ್ ಎಂಬುದು ಚಟುವಟಿಕೆಯ ಶಕ್ತಿ. ಹೀಗಿರುವಾಗ ಪ್ರಪಂಚದ ಸೃಷ್ಟಿಯಾಗಿರುವುದು ಸತ್ವ, ರಜ, ತಮ ಎಂಬ ಮೂರು ಪ್ರಾಕೃತ ಗುಣಗಳಿಂದ ಎಂದು ಶಾಸ್ತ್ರಗಳು ಹೇಳುವುದನ್ನು ವಿಜ್ಞಾನಿಗಳು ಏಕೆ ಒಪ್ಪಬಾರದು? ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದಲ್ಲಿ ಯಾರು ಬೇಕಾದರೂ ಈ ಸತ್ಯವನ್ನು ನೋಡಬಹುದು.]

## Einsteins ; Observations – ಐನ್‌ಸ್ಟೀನ್ ಉವಾಚ

"Cosmologists for the most part maintain silence on the question of ultimate origins, leaving that issue to the philosophers and theology."

"ವಿಶ್ವ ವಿಜ್ಞಾನಿಗಳು ಜಗತ್ತಿನ ಮೂಲ ವಸ್ತುಗಳ ವಿಚಾರದಲ್ಲಿ ಬಹಳ ಮಟ್ಟಿಗೆ ಮೌನವನ್ನು ತಾಳಿದ್ದಾರೆ. ಈ ವಿಷಯವನ್ನು ತತ್ವಜ್ಞಾನಿಗಳು ಮತ್ತು ದೈವವಾದಿಗಳು ಮಾತ್ರ ಹೇಳಬಹುದು." (ಐನ್‌ಸ್ಟೀನ್).

" In the evolution of scientific thought, one fact has become impressively clear; there is no mystery of the physical world which does not point to a mystery beyond itself".

" ವಿಜ್ಞಾನಿಗಳ ಆಲೋಚನಾಪರಂಪರೆಯ ಬೆಳವಣಿಗೆಯಲ್ಲಿ ಒಂದಂಶವು ಮಾತ್ರ ಅಚ್ಚೊತ್ತಿದಂತೆ ಸ್ಪಷ್ಟವಾಗಿದೆ. ಅದೇನೆಂದರೆ, ಭೌತ ಪ್ರಪಂಚದ ಪ್ರತಿಯೊಂದು ರಹಸ್ಯವೂ ತನಗೆ ಗೋಚರಿಸದ ಮತ್ತೊಂದು ರಹಸ್ಯದ ಕಡೆಗೆ ಕೈಮಾಡಿ ತೋರಿಸುತ್ತದೆ."

" All highroads of the intellect, all byeways of theory and conjecture lead ultimately to an abyss that human ingenuity can never span."

"ಬುದ್ಧಿಮತ್ತೆಯ ಪ್ರತಿಯೊಂದು ರಾಜಮಾರ್ಗವೂ, ಪ್ರತಿಯೊಂದು ತಾತ್ಕಾಲಿಕ ನಿರ್ಣಯದ ಮತ್ತು ಊಹೆಯ ಹಾದಿ ಬೀದಿಯೂ ಮಾನವನ ಕೌಶಲವು ದಾಟಲಾಗದ ಮಹಾಕಂದರದ ಒಳಗೆ ಕೊಂಡೊಯ್ದು ಬಿಡುತ್ತದೆ."

## The Michaelson-Morley experiment with the Interferometer

**ಮೈಕೆಲ್‌ಸನ್-ಮಾರ್ಲೇಯವರ "ಇಂಟೆರ್‌ಫೆರೋಮೀಟೆರ್" ಪ್ರಯೋಗ.**

" The Michaelson-Morley experiment confronted the scientists with an embarassing alternative (i) scraping the either theory; or (ii) Accepting it. If the second, they had to abandon the Copernician concept of the earth in motion and to say that the earth stood still "

" ಮೈಕೇಲ್‌ಸನ್–ಮಾರ್ಲೇಯವರು ನಡೆಸಿದ 'ಇಂಟೆರ್ ಫೆರೋ ಮೀಟರ್' ಪ್ರಯೋಗವು ಅವರನ್ನು ತಬ್ಬಿಬ್ಬುಗೊಳಿಸುವ ಇಬ್ಬಂದಿ ಯೋಚನೆಗೆ ಎಡೆಗೊಟ್ಟಿತು—(i) ಈಥರ್ ಅಥವ ಆಕಾಶ ತತ್ವವಿದೆ ಎಂಬುದನ್ನು ಕೈಬಿಡಬೇಕು ;

ಅಥವ, (ii) ಕೋಪರ್ನಿಕಸನ ಭೂಭ್ರಮಣೆಯ ಅಭಿಪ್ರಾಯವನ್ನು ಅಲ್ಲಗಳೆದು, ಭೂಮಿಯು ಸ್ಥಿರವಾಗಿದೆ ಎನ್ನಬೇಕು."

'The first three minutes'–Steven Weinberg.
"ಮೊದಲ ಮೂರು ನಿಮಿಷಗಳು"–ಸ್ಟೀವೆನ್ ವೀನ್‌ಬರ್ಗ್

"True, the sky rotates around the pole star, and over longer times the moon itself waxes and wanes, and the moon and the planets move against the back ground of stars–But these are merely local phenomena caused by motions within our solar system.

"ಆಕಾಶವೇ ಧ್ರುವನಕ್ಷತ್ರಕ್ಕೆ ಪ್ರದಕ್ಷಿಣೆಯಾಗಿ ಸುತ್ತುತ್ತದೆ ಎಂಬುದು ನಿಜ; ಸ್ವಲ್ಪ ಹೆಚ್ಚು ಅವಧಿಯಲ್ಲಿ ನಕ್ಷತ್ರಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಚಂದ್ರನೂ ಇತರ ಗ್ರಹಗಳೂ ಚಲಿಸುತ್ತವೆ ಎಂಬುದೂ ನಿಜ. ಆದರೆ, ಅವು ಕೇವಲ ಸೌರ ವ್ಯೂಹಕ್ಕೆ ಸೀಮಿತಗಳಾದ ಸ್ಥಳೀಯ ವಿದ್ಯಮಾನಗಳು."

[ಶ್ರೀ ವಾದಿರಾಜ ಗುರುಸಾರ್ವಭೌಮರು ಭಾಗವತಾದಿ ಪುರಾಣಗಳ ಪ್ರಕಾರ ವರ್ಣಿಸಿರುವ ಕಾಲಚಕ್ರದ ವ್ಯವಸ್ಥೆಯನ್ನು ಮೇಲೆ ಹೇಳಿದ ಮಾತುಗಳು ಧೃಢೀಕರಿಸುತ್ತವೆ.]

'The Primeval Universe'-'ಪ್ರಾಚೀನ ವಿಶ್ವ'
Prof J. V. Narlikar ಪ್ರೊ|| ಜೆ. ವಿ. ನಾರ್ಲಿಕರ್

"I am always intrigued by the above quotation (Vishnu Purana, Chapter III-VI-12-15), one which is also found in some other ancient Hindu scriptures ; for, doing the necessary multiplication, we find that the day of Brahma, the creator of the universe is 4.32 bililion years,

a figure that is of the same order of magnitude as current estimates of the age of the universe based on the latest astronomical observations, How did the ancients arrive at this figure ? ''

" ಮೇಲೆ ಉದಾಹರಿಸಿದ ಉದ್ಧೃತ ವಾಕ್ಯಗಳು ಯಾವಾಗಲೂ ನನ್ನನ್ನು ಕಾಡಿಸುತ್ತವೆ. (ವಿಷ್ಣುಪುರಾಣ, ಅಧ್ಯಾಯ III-VI, 12-15) ಇಂತಹುದೇ ಮಾತು ಇನ್ನಿತರ ಕೆಲವು ಹಿಂದೂ ಶಾಸ್ತ್ರಗಳಲ್ಲಿಯೂ ಕಂಡು ಬರುತ್ತದೆ. ನನ್ನ ದಿಗ್ಭ್ರಮೆಗೆ ಕಾರಣವೇನೆಂದರೆ, ಲೆಕ್ಕಾಚಾರದ ಪ್ರಕಾರ ಸೃಷ್ಟಿಕರ್ತನಾದ ಬ್ರಹ್ಮನ ಒಂದು ಹಗಲೆಂದರೆ 432 ಕೋಟಿ ವರ್ಷಗಳಾಗುವುವು. (" ಚತುರ್ಯುಗ ಸಹಸ್ರಾಣಾಂ ಬ್ರಹ್ಮಣೋ ದಿನ ಮುಚ್ಯತೇ "–ಭಗವದ್ಗೀತಾ.) ಅತ್ಯಾಧುನಿಕ ಖಗೋಳ ವೀಕ್ಷಣೆಯಿಂದ ವಿಶ್ವದ ವಯೋಮಾನವನ್ನು ಕಂಡು ಹಿಡಿದಿರುವ ಲೆಕ್ಕಾಚಾರಕ್ಕೆ ಅದು ಸರಿಯಾಗಿ ಹೊಂದಿಕೊಳ್ಳುತ್ತದೆ. ಪ್ರಾಚೀನರು ಗಣಿತದ ಈ ತೀರ್ಮಾನಕ್ಕೆ ಹೇಗೆ ಬರಲು ಸಾಧ್ಯವಾಯಿತು.? "

[ವೇದಗಳ ಅಧಿಕಾರ ವಾಣಿಯನ್ನೂ, ಋಷಿದರ್ಶನವನ್ನೂ ಒಪ್ಪಲೇಬೇಕೆಂದು ಇದರಿಂದ ಸಿದ್ಧವಾಯಿತಲ್ಲವೆ !]



# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 2 | 10 | ವ್ಯಾಖ್ಯಾನು | ವ್ಯಾಖ್ಯಾನ |
| 11 | 1,18 | ರಮಾ ನಾರಾಯಣರು | ರಮಾನಾರಾಯಣರು |
| 16 | 8 | ದೃಜ್ಮೀನ | ದೃಕ್‌ಮಾನ |
| 16 | 12 | ಸತ್ಯಸ್ಯಚೇಜ್ಞತಂ | ........ಚೇಂಗಿತಂ |
| 19 | 22 | ಶತ್ಸಹಸ್ಸಾಣಿ | ಶತ್ಸಹಸ್ರಾಣಿ |
| 20 | 10 | ಪೃಥಿವ್ಯಾಸಮಸೋ | ........ಸ್ತಮಸೋ |
| 22 | 11 | 28 | 56 |
| 25 | 25 | ಸಾಗರಂ | ಸಾಗರಾ |
| | 26 | ವಿಸಾರಂ | ವಿಸ್ತಾರಾ |
| 29 | 11 | ಭವತ್ | ಭವೇತ್ |
| | 14 | ಸರ್ಗೋಶ್ತಾ | ಸರ್ಗೋಶ್ತ್ರೈ |
| 31 | 16 | ದುಲ | ಮಲ |
| 35 | 34 | ಮೋಹೀ | ಮಹೀ |
| 37 | 11 | ಲಕ್ಷ್ಮೈಶ್ವ | ಲಕ್ಷ್ಮೈಶ್ಚ |
| 39 | 13 | ಲಕ್ಷಕೈ | ಲಕ್ಷಕೈಃ |
| 41 | 2 | ದ್ವೀಪದ | ದ್ವೀಪಗಳೂ |
| 53 | 5 | ವರ್ತತೇಃ | ವರ್ತತೇ |
| | 6 | ಪ್ರಾಚಾ | ಪ್ರಾಚ್ಯಾಂ |
| 54 | 10 | ದೇವಕೋ | ದೇವಕೂ |
| 56 | 19 | ನಿಷೇಧ | ನಿಷಧ |
| 71 | 14 | ಕರ್ಮಣಾಂ | ಕರ್ಮಣಾ |
| 78 | 1 | ದೇಹ | ದೇವ |
| 80 | 23 | ರಾತಾಣೀತಿ | ರಾತ್ರಾಣೀತಿ |

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| | 24 | ಪದಪದ್ಧವೇತ್ | ಪದವದ್ಧವೇತ್ |
| 81 | 6 | ಮಾಸಪುಭೌ | ಮಾಸಾವುಭೌ |
| 84 | 2 | ಕಡಿವೇಗ | ಕಡಿಮೆ ವೇಗ |
| 95 | 18 | ಮಾಶೋಹ | ಮಾರೋಹ |
| | 19 | ಚಾಪರಂ | ಚಾಪರಾ |
| 98 | 14 | ಲಕ್ಷ | 11 ಲಕ್ಷ |
| | 27 | ಶುಭೋನಕೈಃ | ಶುಭೋದಕೈಃ |
| 101 | 3 | ವ್ಯಾಜ್ಯಾ<br>ವಿರ್ಣಿತಂ | ವ್ಯಾಜಾ<br>ವರ್ಣಿತಂ |



# ಭೂಗೋಳ ವರ್ಣನೆ

## ( ಅರ್ಥಾತ್ ಬ್ರಹ್ಮಾಂಡ ವರ್ಣನೆ )

ಭೂಮಿ ಸೌರವ್ಯೂಹದ ಗ್ರಹವಲ್ಲ, 30 ಕೋಟಿ ಮೈಲಿ ವಿಸ್ತಾರವಾದ ಭೂಮಂಡಲದ ಕೇಂದ್ರ, ಮೇರು ಪರ್ವತ. ಅದನ್ನು ಪ್ರದಕ್ಷಿಣೆಯಾಗಿ ಸುತ್ತಿ ಬರುವ ಸೂರ್ಯ ಗ್ರಹರಾಜನೂ ಹೌದು ; ನಕ್ಷತ್ರಗಳ ಜನಕನೂ ಹೌದು.

ಅನುವಾದ, ವ್ಯಾಖ್ಯಾನ
ವಿ. ಬಾದರಾಯಣ ಮೂರ್ತಿ